CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಜನವರಿ ೨೨, ೨೦೦೪ (ಮಾಘ ೨, ಶಕ ವರ್ಷ ೧೯೨೫) | ಸಂಚಿಕೆ ೪ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬೀದರ್ ವಿಭಾಗ, ಬೀದರ್,**
**ಇವರ ನ್ಯಾಯಾಲಯ, ಬೀದರ್**

**ಅಧಿಸೂಚನೆ**

**ಸಂಖ್ಯೆ: ಉಅಸಂ:ಬಿ:ಅ.ವಾ.ಮಾ:ಮುಟ್ಟುಗೋಲು:ಸಿಆರ-01:03-04, ದಿನಾಂಕ: 2ನೇ ಡಿಸೆಂಬರ್ 2003**

ಬೀದರ್ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧದ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಬೀದರ್ ವಿಭಾಗದ ಇಲಾಖಾ ಸಿಬ್ಬಂದಿ ಹಾಗೂ ಪೊಲೀಸ್ ಇಲಾಖಾ ಸಿಬ್ಬಂದಿ ವರ್ಗದವರು ಸರಕಾರದ ಪರ ಅಮಾನತ್ತು ಪಡಿಸಿಕೊಂಡು ಸದರಿ ವಾಹನಗಳನ್ನು ಕರ್ನಾಟಕ ಅರಣ್ಯ 1963 ರ ಸೆಕ್ಷನ್ 71(ಎ) ಪ್ರಕಾರ ಕ್ರಮ ಜರುಗಿಸುವಂತೆ ಈ ಕಾರ್ಯಲಯಕ್ಕೆ ಹಾಜರುಪಡಿಸಲಾದ ವಾಹನಗಳ ವಿವರ ಈ ಕೆಳಗಿನಂತಿದೆ.

| ಕ್ರ. ಸಂ. | ವಾಹನದ ವಿವರ | ಪೊಲೀಸ್/ಅರಣ್ಯ ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1 | MH-01-U-1137 | 102/2003 | S.B. 308, 1N-2074437 | 3092396 |

ಈ ಮೇಲೆ ತೋರಿಸಿರುವ ವಾಹನದ ಬಗ್ಗೆ ವಾರಸುದಾರರು ಇಲ್ಲಿಯವರೆಗೆ ಹಾಜರಾಗದೇ ಇರುವುದರಿಂದ ಸದರಿ ವಾಹನದ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನದ ಬಗ್ಗೆ ಅಧಿಕೃತ ಹಕ್ಕು ಬಾಧ್ಯತೆಗಳನ್ನು ಕೆಳ ಸಹಿ ಮಾಡಿರುವರ ಸಮ್ಮುಖದಲ್ಲಿ ಅಧಿಸೂಚನೆಯು ಕರ್ನಾಟಕ ಸರಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರು ಪಡಿಸಬೇಕಾಗಿ ಮತ್ತು ವಾಹನವನ್ನು ಶ್ರೀಗಂಧ ಮತ್ತು ಇತರೆ ಅರಣ್ಯ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡಲು ಉಪಯೋಗಿಸಿದಕ್ಕಾಗಿ ವಾಹನವನ್ನು ಏಕೆ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳ ಅಧಿಕೃತ ಸಮಜಾಯಿಸಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳಸಹಿ ಮಾಡಿದವರ ಸಮ್ಮುಖದಲ್ಲಿ ಹಾಜರು ಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಈ ಮೇಲಿನ ವಾಹನಗಳ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳ ಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನವನ್ನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ಎರಡನೇ ತಿದ್ದುಪಡಿ ಪ್ರಕಾರ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಪಿ.ಆರ್. 1409 ಉಪ ಅರಣ್ಯ ಸಂರಕ್ಷಣಾಧಿಕಾರಿ, ಪ್ರಾದೇಶಿಕ ಅರಣ್ಯ ವಿಭಾಗ, ಬೀದರ್.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ನ್ಯಾಯಾಲಯ, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ**

**ಅಧಿಭಾರ ಅರ್ಜಿ ನಂ.6:2002-03**

**ಅರ್ಜಿದಾರರು**
ಕಡೇಕಲ್ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ (ನಿ),
ಕಡೇಕಲ್, ಶಿವಮೊಗ್ಗ ತಾಲ್ಲೂಕು
ಇದರ ಪರವಾಗಿ ಕಾರ್ಯದರ್ಶಿ

**ಎದುರು ಅರ್ಜಿದಾರರು**
ಶ್ರೀ ಎಸ್.ಎಂ. ತಿಮ್ಮಯ್ಯ, ಬಿನ್ ಮೂಡ್ಲಗಿರಿಯಪ್ಪ,
ಮಾಜಿ ಕಾರ್ಯದರ್ಶಿ, ವಿಎಸ್ಎಸ್‌ಬಿಎನ್, ಕಡೇಕಲ್.
ವಾಸ: ಹೊನ್ನನಾಯಕನಹಳ್ಳಿ, ಗರಗ ಅಂಚೆ, ಚನ್ನಗಿರಿ ತಾಲ್ಲೂಕು.

(ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 103ರ ಮೇರೆಗೆ ತೀರ್ಪು ಪೂರ್ವ ಜಪ್ತು ಆಜ್ಞೆ)

**ಪ್ರಸ್ತಾವನೆ:**

ಎದುರು ಅರ್ಜಿದಾರರಾದ ಶ್ರೀ ಎಸ್.ಎಂ. ತಿಮ್ಮಯ್ಯ, ಬಿನ್ ಮೂಡ್ಲಗಿರಿಯಪ್ಪ, ಇವರು ಅರ್ಜಿದಾರರ ಬ್ಯಾಂಕಿನಲ್ಲಿ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸಿದ್ದ ಸಂದರ್ಭದಲ್ಲಿ ಬ್ಯಾಂಕಿನಲ್ಲಿ ನಡೆಯಿತೆನ್ನಲಾದ ರೂ.442322-25 (ನಾಲ್ಕು ಲಕ್ಷದ ನಲವತ್ತೆರಡು ಸಾವಿರದ ಮೂರು ನೂರ ಇಪ್ಪತ್ತೆರಡು ಪೈಸೆ ಇಪ್ಪತ್ತೈದು ಮಾತ್ರ) ದುರುಪಯೋಗದ ಮೊತ್ತಕ್ಕೆ ಜವಾಬ್ದಾರರೆಂದು 1999-2000 ಮತ್ತು 2000-01ನೇ ಸಾಲಿನ ಬ್ಯಾಂಕಿನ ಆಡಿಟ್ ವರದಿಯಿಂದ ಕಂಡುಬಂದಿರುತ್ತದೆ. ಇದರಿಂದ ವಸೂಲಿ ಕ್ರಮಕ್ಕಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 69ರನ್ವಯ ಅಧಿಭಾರ ಅರ್ಜಿಯನ್ನು ಮೇಲ್ಕಂಡ ನ್ಯಾಯಾಲಯದಲ್ಲಿ ಅರ್ಜಿದಾರರು ಸಲ್ಲಿಸಿದ್ದು, ಸದರಿ ಪ್ರಕರಣದ ತೀರ್ಪನ್ನು ಕಾಯ್ದಿರಿಸಿ ಎದುರು ಅರ್ಜಿದಾರರಿಗೆ ಸೇರಿದ ಕೆಳಕಾಣಿಸಿದ ಅನುಸೂಚಿಯಲ್ಲಿರುವ ಸ್ಥಿರ ಸ್ವತ್ತುಗಳನ್ನು ಕಾಯ್ದೆ ಕಲಂ 103 ರಂತೆ ತೀರ್ಪು ಪೂರ್ವ ಜಪ್ತಿ ಆಜ್ಞೆ ಹೊರಡಿಸಲು ಅರ್ಜಿದಾರರು ಅರ್ಜಿ ಸಲ್ಲಿಸಿದ ಹಿನ್ನೆಲೆಯಲ್ಲಿ ಕೆಳಸಹಿದಾರರು ಜಪ್ತಿಗೊಳಿಸಲ್ಪಟ್ಟ ಆಸ್ತಿಯ ಮೌಲ್ಯಕ್ಕೆ ತಕ್ಕಷ್ಟು ಮತ್ತು ನ್ಯಾಯಾಲಯ ಸರಿಯೆಂದು ಭಾವಿಸುವ ನಗದು ಭದ್ರತೆಯನ್ನು (ಕ್ಯಾಷ್ ಸೆಕ್ಯೂರಿಟಿ) ಒದಗಿಸಬೇಕೆಂಬ ಷರತ್ತು ಸಹಿತ ಎದುರಿಯವರ ಪತ್ನಿಯ ಹೆಸರಿನಲ್ಲಿರುವ ಸ್ಥಿರಾಸ್ತಿಗಳನ್ನು ತೀರ್ಪು ಪೂರ್ವ ಜಪ್ತಿ ಆಜ್ಞೆ ನೋಟೀಸಿನೊಂದಿಗೆ ಆದೇಶವನ್ನು ದಿನಾಂಕ:26-8-2003 ರಂದು ಹೊರಡಿಸಿದ್ದು, ಸದರಿ ಷರತ್ತು ಪೂರ್ವ ಆದೇಶದ ನೋಟೀಸನ್ನು ಎದುರಿಯವರು ಮತ್ತು ಅವರ ಪತ್ನಿ ಇವರುಗಳಿಗೆ ನೀಡಿತ್ತು. ಸದರಿ ಆದೇಶದಲ್ಲಿ ತಿಳಿಸಿದಂತೆ ಷರತ್ತು ಪೂರೈಸಲು ಎದುರು ಅರ್ಜಿದಾರರು ವಿಫಲರಾಗಿರುತ್ತಾರೆ. ಮೇಲೆ ಹೇಳಿದ ತೀರ್ಪು ಪೂರ್ವ ಜಪ್ತಿ ಆಜ್ಞೆಯನ್ನು ಪಕ್ಕ (ಖಾಯಂ) ಗೊಳಿಸಲು ಕೆಳಕಾಣಿಸಿದ ಆದೇಶ ನೀಡಲಾಗಿದೆ.

**ಆದೇಶ**

**ಕ್ರಮಾಂಕ:ಸನಿಶಿ24:ಎಬಿಎನ್:ಎಬಿಜೆ:02-03, ದಿನಾಂಕ: 27ನೇ ಅಕ್ಟೋಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ಶಿವಮೊಗ್ಗ ಉಪವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರಾದ ಶ್ರೀ ಎ.ಎಸ್. ಜಯಪ್ಪ, ಆದ ನಾನು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 103 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಎದುರು ಅರ್ಜಿದಾರರ ಪತ್ನಿಯವರ ಹೆಸರಿನಲ್ಲಿರುವ ಈ ಕೆಳಕಂಡ "ಅನುಸೂಚಿ"ಯಲ್ಲಿ ತೋರಿಸಿದ ಸ್ಥಿರಾಸ್ತಿಯನ್ನು ಮೇಲ್ಕಂಡ ಅಧಿಭಾರ ಅರ್ಜಿಯ ತೀರ್ಪನ್ನು ಕಾಯ್ದಿರಿಸಿ ದಿ:26-8-2003ರ ಷರತ್ತು ಪೂರ್ವ ಜಪ್ತಿ ಆದೇಶವನ್ನು ಸ್ಥಿರೀಕರಿಸಿ ಆದೇಶಿಸಿದೆ.

**ಜಪ್ತಿ ಆದೇಶಕ್ಕೆ ಒಳಗಾದ ಸ್ವತ್ತುಗಳ ಅನುಸೂಚಿ**

| ಕ್ರ. ಸಂ. | ಖಾತೆದಾರರ ಹೆಸರು | ಸ್ಥಿರಾಸ್ತಿ ಇರುವ ಸ್ಥಳ | ಖಾತೆ:ಸರ್ವೆ ನಂ. | ವಿಸ್ತೀರ್ಣ | ತರಹೆ |
|---|---|---|---|---|---|
| 1. | ಜಯಮ್ಮ ಕೋಂ. ತಿಮ್ಮಯ್ಯ ಎಸ್.ಎಂ. | ಚನ್ನಗಿರಿ ತಾ: ಕಸಬಾ ಹೋಬಳಿ ಗರಗ ಗ್ರಾಮ | ಸರ್ವೆ ನಂ. 43 ಎಂಆರ್ 13 88-89 | 5.00 ಎಕರೆ | ಖುಷ್ಕಿ |

ಈ ಆದೇಶವನ್ನು ದಿನಾಂಕ:27-10-2003 ರಂದು ನ್ಯಾಯಾಲಯದ ಮೊಹರು ಮತ್ತು ಸ್ವಸಹಿಯೊಂದಿಗೆ ನೀಡಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ.

ಪಿ.ಆರ್. 1411

**IN THE COURT OF COMMISSIONER FOR WORKMEN'S COMPENSATION, BIDAR**

**No: LOB/WCA/Cr-44/2003**

**Applicants:**

1. Munnawathi W/o Basappa @ Bassayya Swami age 30 years Occ House hold R/o Village Gadi Goundgoan Tq Basava Kalyan Dist- Bidar & 3 others

**V/s**

**Respondents:**

1. Shanker S/o Dhullappa Latore Age Major Occ: Business R/o Bodhwarpeth Basavakalyan Dist- Bidar
2. New India Assurance Co.Ltd., Bidar

**PROCLAMATION**

Sri/Smt. Munnawathi W/o. Basappa @ Bassayya Swami R/o Village Gadi Goundgoan Tq Basavakalyan Dist Bidar have/has filed application in this court claiming compensation stating that Late Basappa @ Bassayya Swami was working as Cleaner Under the Respondent No I he met with an accident arising out of and during the course of employment as a result he died on 19.6.2003.

Wherefore, it is hereby notified for the information of these concerned that other dependents if any may file their claim application and objections within 30 days from the date of publication of this Proclamation. If no applications or objections are received within the specified date the court will proceeded further in the matter.

COMMISSIONER FOR WORKMEN'S COMPENSATION, BIDAR.

P.R. 1412

**IN THE COURT OF COMMISSIONER FOR WORKMEN'S COMPENSATION, BIDAR**
**No: LOB/WCA/Cr-1/2004**

| Applicants: | V/s | Respondents: |
|---|---|---|
| 1. Shakuntala W/o Late Nagshetty<br>Age: 42 years Occ: House hold<br>R/o Mangalpeth Bidar & 4 others | | 1. The Executive Engineer (Elec) KPTCL Bidar<br>2. The Asst Executive Engineer (Elec) KPTCL Bidar |

**PROCLAMATION**

Sri/Smt. Shakuntala W/o. Nagshetty R/o Mangalpeth Bidar have/has filed application in this court claiming compensation stating that Late Nagshetty was working as Lineman Under the Respondent No I he met with an accident arising out of and during the course of employment as a result he died on 24.2.2003.

Wherefore, it is hereby notified for the information of these concerned that other dependents if any may file their claim application and objections within 30 days from the date of publication of this Proclamation. If no applications or objections are received within the specified date the court will proceeded further in the matter.

COMMISSIONER FOR WORKMEN'S COMPENSATION, BIDAR.

P.R. 1413

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಹಾಸನ ಜಿಲ್ಲೆ ಹಾಸನ**
**ಸಂ:ಕಾಪಕಾ:ಎಫ್:ಎಸ್ಆರ್-18:2003**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1. ಶ್ರೀ ಚನ್ನಯ್ಯ ಬಿನ್ ಪುಟ್ಟಯ್ಯ, ವಯಸ್ಸು 48 ವರ್ಷ<br>2. ಭಾಗ್ಯ ಬಿನ್ ಚನ್ನಯ್ಯ, 30 ವರ್ಷ<br>3. ಕೇಶವ ಬಿನ್ ಚನ್ನಯ್ಯ, 28 ವರ್ಷ<br>ವಾಸ: ಮುದಿಗೆರೆ ಗ್ರಾಮ, ಮಲ್ಲಿಪಟ್ಟಣ ಹೋಬಳಿ, ಅರಕಲಗೂಡು ತಾಲ್ಲೂಕು. ಹಾಸನ ಜಿಲ್ಲೆ. | | ತೇಲಪಂಡ ಎಂ. ದೇವಯ್ಯ ಬಿನ್ ಲೇಟ್ ಮಾಣ್ಣಚ್ಚ, ವಯಸ್ಸು 35 ವರ್ಷ ಬೇಗೂರು ಗ್ರಾಮ, ಚೇರಂಬಾಣೆ ಅಂಚೆ, ಮಡಿಕೇರಿ ತಾಲ್ಲೂಕು, ಮಡಿಕೇರಿ ಜಿಲ್ಲೆ. |

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಸಣ್ಣಮ್ಮ ಅಲಿಯಾಸ್ ಚನ್ನಮ್ಮ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ 20-4-2003 ರಂದು ಸಾವನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್. ಗೋಪಾಲಗೌಡ**

ಪಿ.ಆರ್. 1414

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಹಾಸನ ಜಿಲ್ಲೆ, ಹಾಸನ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಹಾಸನ ಜಿಲ್ಲೆ ಹಾಸನ**
**ಸಂ:ಕಾಪಕಾ:ಎಫ್:ಎಸ್ಆರ್-24:2003**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1. ಶ್ರೀಮತಿ ಮಂಗಳಗೌರಿ ಕೋಂ ಲೇಟ್ ರಾಜೇಶ್ ಸುಮಾರು 26 ವರ್ಷ,<br>2. ಅನಿತಾ, ಸುಮಾರು 9 ವರ್ಷ<br>3. ಮನು, ಸುಮಾರು 7 ವರ್ಷ<br>ವಾಸ: ಕಾಮಕೆರೆ ಗ್ರಾಮ, ದೊಡ್ಡ ಕಣಾಗಾಲ್ ಅಂಚೆ, ಆಲೂರು ತಾ।। ಹಾಸನ ಜಿಲ್ಲೆ | | 1. ಶ್ರೀ ಲಕ್ಷ್ಮೀಗೌಡ @ ತಮ್ಮಯ್ಯಣ್ಣ ಬಿನ್ ಕೃಷ್ಣೇಗೌಡ, ಲಕ್ಷ್ಮಿ ಟಿಫನ್ ಸೆಂಟರ್, ಗೊರೂರು ರಸ್ತೆ, ಹಾಸನ.<br>2. ದಿ ಡಿವಿಜನಲ್ ಮ್ಯಾನೇಜರ್, ದಿ ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿ., ಎಸ್.ವಿ.ನಿಲಯ, ಬಿ.ಎಂ.ರಸ್ತೆ, ಹಾಸನ. |

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಶ್ರೀ ರಾಜೇಶ್ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ 4-9-2002 ರಂದು ಸಾವನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್. ಗೋಪಾಲಗೌಡ**

ಪಿ.ಆರ್. 1415 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,

ಹಾಸನ ಜಿಲ್ಲೆ, ಹಾಸನ.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು

## ಪ್ರಾರಂಭಿಕ (ಪ್ರಿಲಿಮಿನರಿ) ಅಧಿಸೂಚನೆ ದಿನಾಂಕ: 24ನೇ ಡಿಸೆಂಬರ್ 2003

ನಂ.ಎಂಯುಎನ್(4)ಸಿಆರ್‌ಕೆಎಸ್ಎ10:02-03, ಬೆಂಗಳೂರು ಗ್ರಾಮಾಂತರ ಜಿಲ್ಲೆಯ ವ್ಯಾಪ್ತಿಯಲ್ಲಿರುವ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶದಲ್ಲಿ 100 (ಒಂದು ನೂರು) ಗುಡಿಸಲುಗಳು ಇದ್ದು, ಇಲ್ಲಿನ ಜನ ಸಂಖ್ಯೆ ಸುಮಾರು 500 (ಐದು ನೂರು) ಇರುತ್ತದೆ. ಈ ಕೊಳಚೆ ಪ್ರದೇಶದಲ್ಲಿ ನಗರ ಸಭೆವತಿಯಿಂದ ಬೀದಿ ದೀಪ ಮತ್ತು ಕುಡಿಯುವ ನೀರಿನ ಸೌಲಭ್ಯವನ್ನು ಒದಗಿಸಿರುತ್ತಾರೆ. ಇನ್ನಿತರ ಮೂಲಭೂತ ಸೌಕರ್ಯಗಳಾದ ರಸ್ತೆ, ಚರಂಡಿ ವ್ಯವಸ್ಥೆ ಮತ್ತು ಸಾರ್ವಜನಿಕ ಶೌಚಾಲಯದ ವ್ಯವಸ್ಥೆ ಇರುವುದಿಲ್ಲ. ಇಲ್ಲಿನ ನಿವಾಸಿಗಳು ವಸತಿ ಸೌಲಭ್ಯ ಮತ್ತು ಮೂಲಭೂತ ಸೌಕರ್ಯ ಒದಗಿಸಿಕೊಡಬೇಕೆಂದು ಒತ್ತಾಯಿಸುತ್ತಿರುವುದರಿಂದ ಮತ್ತು ಈ ಕೊಳಚೆ ಪ್ರದೇಶವು ಅತ್ಯಂತ ಜನಸಂಖ್ಯೆಯಿಂದ ಕೂಡಿದ್ದು, ಅತ್ಯಂತ ಅನಾರೋಗ್ಯಕರವಾದ ವಾತಾವರಣದಲ್ಲಿ ವಾಸ ಮಾಡುತ್ತಿರುವುದು ಕಂಡು ಬಂದಿರುವುದಾಗಿ ಸಂಬಂಧಪಟ್ಟ ಅಧಿಕಾರಿಗಳು ವರದಿ ಮಾಡಿರುವುದರಿಂದ ಈ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶ (ಅಭಿವೃದ್ಧಿ ಮತ್ತು ನಿರ್ಮೂಲನ) ಕಾಯ್ದೆ 1973ರ ಕಲಂ 3ರ ಪ್ರಕಾರ ಕೊಳಚೆ ಪ್ರದೇಶವೆಂದು ಘೋಷಿಸುವುದು ಅವಶ್ಯವೆಂದು ಕಂಡುಬಂದಿದೆ.

ಆದ್ದರಿಂದ ಮೇಲ್ಕಂಡ ಎಲ್ಲಾ ಕಾರಣಗಳಿಂದ ಈ ಕೆಳಗಿನ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶ (ಅಭಿವೃದ್ಧಿ ಮತ್ತು ನಿರ್ಮೂಲನ) ಕಾಯ್ದೆ 1973ರ (ಕರ್ನಾಟಕ ಆಕ್ಟ್ 33ರ 1971ರಂತೆ) ಕಲಂ 3ರ ಪ್ರಕಾರ ಹಾಗೂ ಸರ್ಕಾರದ ಅಧಿಸೂಚನೆ ಸಂ.ವಸಇ 49 ಎಂಸಿಎಸ್ 85 ದಿನಾಂಕ 17ನೇ ಏಪ್ರಿಲ್ 1986ರ ಪ್ರಕಾರ ಜಿಲ್ಲಾಧಿಕಾರಿಗಳಿಗೆ ದತ್ತವಾಗಿರುವ ಅಧಿಕಾರದಂತೆ ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರುರವರು ಕೊಳಚೆ ಪ್ರದೇಶವೆಂದು ಘೋಷಿಸಲು ಉದ್ದೇಶಿಸಿರುತ್ತಾರೆ.

ಈ ಮೇಲ್ಕಂಡ ಕ್ರಮದ ಬಗ್ಗೆ ಆಕ್ಷೇಪಣೆಗಳು ಇದ್ದಲ್ಲಿ, ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳಿಗೆ ಮತ್ತು ಕಾರ್ಯದರ್ಶಿಗಳು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ನಂ.55, ರಿಸಿಲ್ದಾರ್ ರಸ್ತೆ, ಬೆಂಗಳೂರು-20 ಇವರಿಗೆ ಲಿಖಿತ ಮೂಲಕ ಆಕ್ಷೇಪಣೆಗಳನ್ನು ಸಲ್ಲಿಸಲು ಈ ಅಧಿಸೂಚನೆಯು ರಾಜ್ಯ ಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ 15 ದಿವಸಗಳವರೆಗೆ ಕಾಲಾವಕಾಶವನ್ನು ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

**ಷೆಡ್ಯೂಲ್**

| ಕ್ರ. ಸಂ. | ಕೊಳಚೆ ಪ್ರದೇಶ | ಸ್ವತ್ತಿನ ಮಾಲೀಕರ ಹೆಸರು | ನಗರಸಭೆ ಅಸೆಸ್‌ಮೆಂಟ್ ಸಂ. | ವಿಸ್ತೀರ್ಣ | ಚೆಕ್ಕುಬಂದಿ | | | |
|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | ತಟ್ಟೆಕೆರೆ ಕೊಳಚೆ ಪ್ರದೇಶ, ಚನ್ನಪಟ್ಟಣ ನಗರಸಭೆ ವ್ಯಾಪ್ತಿ | ಸರ್ಕಾರಿ ಗೋಮಾಳ | 1556-1 ರಿಂದ 1556-13, 1557-185 ರಿಂದ 1557-187 ಮತ್ತು 2229 | ಎ. - ಗುಂ. 01-17 | ನೀರಿನ ಟ್ಯಾಂಕ್ ಮತ್ತು ಸುಣ್ಣದ ಗೂಡು ರಸ್ತೆ | ಸರ್ಕಾರಿ ಸ್ವತ್ತು | ಹಳ್ಳಿ | ರಸ್ತೆ ಮತ್ತು ರಾಜೀವ್ ಗಾಂಧಿ ಆಶ್ರಯ ಯೋಜನೆ ಯಡಿಯಲ್ಲಿ ನಿರ್ಮಿಸಿರುವ ಕಟ್ಟಡಗಳ ಪ್ರದೇಶ |

**ಬಿ.ಪಿ. ಕನಿರಾಂ**

ಪಿ.ಆರ್. 1416 ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ.

## ಮಾನ್ಯ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿ.ವಿ.) ಮತ್ತು ಜೆ.ಎಂ.ಎಫ್.ಸಿ., ರವರ ನ್ಯಾಯಾಲಯ, ಚಾಮರಾಜನಗರ

## ನೋಟೀಸು

**ವಿಷಯ:** ವಾರಸುದಾರರಿಲ್ಲದಿರುವ ವಾಹನವನ್ನು ವಿಲೇವಾರಿ ಮಾಡುವ ಬಗ್ಗೆ.

ಈ ಮೂಲಕ ಸಾರ್ವಜನಿಕರಿಗೆ ತಿಳಿಸುವುದೇನೆಂದರೆ, ಈ ಕೆಳಕಂಡ ವಾಹನವನ್ನು ಚಾಮರಾಜನಗರದ ಪೂರ್ವ ಪೊಲೀಸ್ ಠಾಣೆಯವರು ಅಮಾನತ್ತು ಪಡಿಸಿದ್ದು. ಇದಕ್ಕೆ ವಾರಸುದಾರರು ಇರುವುದಿಲ್ಲ ಎಂದು ಚಾಮರಾಜನಗರದ ಪೂರ್ವ ಪೊಲೀಸ್ ಠಾಣೆಯ ಸಬ್ ಇನ್ಸ್‌ಪೆಕ್ಟರ್‌ರವರು ವರದಿ ಮಾಡಿರುತ್ತಾರೆ. ಸದರಿ ಮಾಲುಗಳಿಗೆ ವಾರಸುದಾರರು ಯಾರಾದರೂ ಇದ್ದಲ್ಲಿ ಅವರುಗಳು ಪೂರ್ಣ ಮಾಹಿತಿಯೊಂದಿಗೆ ತಮ್ಮ ವಾರಸುದಾರಿಕೆಯನ್ನು ಈ ವಿಷಯ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ದಿನಾಂಕದಿಂದ 30 ದಿನಗಳ ಒಳಗಾಗಿ ರುಜುವಾತುಪಡಿಸಿ ತಮ್ಮ ಮಾಲು ಪಡೆಯಬಹುದಾಗಿದೆ. ತಪ್ಪಿದ್ದಲ್ಲಿ ಸದರಿ ಮಾಲನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಲಾಗಿರುತ್ತದೆ ಎಂದು ಆದೇಶಿಸಿರುತ್ತಾರೆ.

ವಾಹನದ ವಿವರ ಈ ಕೆಳಕಂಡಂತಿರುತ್ತದೆ.

| ಸಿ. ಸಿ. ನಂ. | ಪಿ.ಆರ್. ನಂ. | ಪಿ.ಎಫ್. ನಂ. | ವಾಹನ ನೋಂದಣಿ ಸಂಖ್ಯೆ | ಬಣ್ಣ | ಇಂಜಿನ್ ನಂ. | ಚಾರ್ಸಿ ನಂ. | ವಿಲೇವಾರಿ ದಿನಾಂಕ |
|---|---|---|---|---|---|---|---|
| 1131/00 | 116/02 | 43/00 | TVS 50 XL TN 36 8085 | ಹಸಿರು | - | A 610 F 485095 | 04.04.03 |

ಹೆಚ್ಚುವರಿ ಸಿವಿಲ್ ಜಡ್ಜ್ (ಜೂನಿಯರ್ ಡಿವಿಜನ್) ಮತ್ತು ಪ್ರಥಮ

ಪಿ.ಆರ್. 1417 ದರ್ಜೆ ನ್ಯಾಯಿಕ ದಂಡಾಧಿಕಾರಿ ಚಾಮರಾಜನಗರ - 571 313

## ಪೊಲೀಸ್ ಕಮೀಷನರ್ ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ

## ಅಧಿಸೂಚನೆ

### ಸಂಖ್ಯೆ:104/ಸಂವಿ/ಸಿ.ಓ.ಪಿ/2003, ದಿನಾಂಕ: 5ನೇ ಜನವರಿ, 2004

ದಿನಾಂಕ: 22-11-2003 ರಂದು ನಾನು ಬೆಂಗಳೂರು ನಗರದ ಕೇಂದ್ರ ಸಂಚಾರ ಉಪ ವಿಭಾಗದ ವ್ಯಾಪ್ತಿಗೆ ಬರುವ ಬಸವೇಶ್ವರ ವೃತ್ತ, ಹೈಗ್ರೌಂಡ್ ಪೊಲೀಸ್ ಠಾಣೆ ವೃತ್ತ, ಟಿ. ಚೌಡಯ್ಯ ರಸ್ತೆ ಹಾಗೂ ರಾಜಭವನ ರಸ್ತೆಯ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಸುಗಮ ಸಂಚಾರ ದೃಷ್ಟಿಯಿಂದ ಏಕಮುಖ ಸಂಚಾರವಾಗಿ ದಿನಾಂಕ: 29-11-2003 ರಿಂದ ಪ್ರಾಯೋಗಿಕವಾಗಿ 30 ದಿವಸಗಳ ಕಾಲ ಜಾರಿಯಲ್ಲಿರುವಂತೆ ಆದೇಶ ಹೊರಡಿಸಿದ್ದೆ.

ಬೆಂಗಳೂರು ನಗರದಲ್ಲಿ ಇತ್ತೀಚೆಗೆ ಅತಿ ಹೆಚ್ಚಿನ ಸಂಚಾರ ಒತ್ತಡವಿದ್ದು ಆಗಿಂದ್ದಾಗ್ಗೆ ವಾಹನ ಚಾಲಕರಿಗೆ ಅನಾನುಕೂಲವಾಗಿ ಕಂಡಿದ್ದು ತುರ್ತಾಗಿ ಸುಗಮ ಸಂಚಾರಕ್ಕೋಸ್ಕರ ಪರಿಹಾರವನ್ನು ಕಂಡುಕೊಳ್ಳಲು ಅಗತ್ಯ ಕ್ರಮಗಳನ್ನು ಕೈಗೊಳ್ಳಲಾಯ್ತು. ಹಾಗೂ ಮೇಲ್ಸೇತುವೆ ನಿರ್ಮಾಣ, ವರ್ತುಲ ರಸ್ತೆ ನಿರ್ಮಾಣಕ್ಕೆ ಅಧಿಕ ವೆಚ್ಚವಾಗುವುದರ ಜೊತೆಗೆ ಹೆಚ್ಚಿನ ಕಾಲ ತೆಗೆದುಕೊಳ್ಳಲಿದ್ದು ಈ ನಿಟ್ಟಿನಲ್ಲಿ ತಕ್ಷಣ ಸುಗಮ ಸಂಚಾರಕ್ಕಾಗಿ ಕೆಲವು ರಸ್ತೆಗಳಲ್ಲಿ ತಾತ್ಕಾಲಿಕವಾಗಿ ಏಕ ಮುಖ ಸಂಚಾರ, ಬಲ ತಿರುವು ಹಾಗೂ ವಾಹನ ನಿಲುಗಡೆಯನ್ನು ನಿಷೇಧಿಸುವುದು ಅವಶ್ಯಕವಾಗಿ ಕಂಡುಬಂತು.

ಇದರ ಬಗ್ಗೆ ತಜ್ಞರ ಹಾಗೂ ವಿವಿಧ ಸಂಸ್ಥೆಗಳ ಅಭಿಪ್ರಾಯವನ್ನು ಪಡೆದು ವಾಹನ ಸಂಚಾರ ದಟ್ಟಣೆಯನ್ನು ಕಡಿಮೆಗೊಳಿಸಲು ಹಾಗೂ ಸುಗಮ ಸಂಚಾರಕ್ಕಾಗಿ, ಅಪಘಾತಗಳ ನಿಯಂತ್ರಣ ಸಲುವಾಗಿ ಹಾಗೂ ವಾಯು ಮಾಲಿನ್ಯವನ್ನು ತಡೆಗಟ್ಟುವ ಸಲುವಾಗಿ ಈ ಮೇಲ್ಕಂಡ ರಸ್ತೆಗಳಲ್ಲಿ ಏಕಮುಖ ಸಂಚಾರವನ್ನು ದಿನಾಂಕ: 29-11-2003 ರಿಂದ ಜಾರಿಯಲ್ಲಿ ಬರುವಂತೆ ಆದೇಶಿಸಿರುತ್ತೇನೆ.

ಆದ್ದರಿಂದ ಸಾರ್ವಜನಿಕ ಹಿತದೃಷ್ಟಿಯಿಂದ ಮತ್ತು ಸುಗಮ ಸಂಚಾರದ ಸಲುವಾಗಿ ಬಸವೇಶ್ವರ ವೃತ್ತದಿಂದ ರಾಜಭವನ ವೃತ್ತದ ಕಡೆಗೆ ಹಾಲಿ ಇರುವ ಏಕಮುಖ ಸಂಚಾರವನ್ನು ಬದಲಾಯಿಸಿ ರಾಜಭವನ ರಸ್ತೆ - ಸಿ.ಟಿ.ಓ ವೃತ್ತದಿಂದ ಬಸವೇಶ್ವರ ವೃತ್ತದ ಕಡೆಗೆ ಎಲ್ಲಾ ವಾಹನ ಸಂಚಾರವನ್ನು ಏಕಮುಖ ಸಂಚಾರವನ್ನಾಗಿ ಬಿಡಲಾಗುವುದು, (ಪೂರ್ವದಿಂದ ಪಶ್ಚಿಮದ ಕಡೆಗೆ). ಟಿ. ಚೌಡಯ್ಯ ರಸ್ತೆ -ಹೈಗ್ರೌಂಡ್ಸ್ ಪಿ.ಎಸ್. ಜಂಕ್ಷನ್‌ನಿಂದ ರಾಜಭವನ್ ವೃತ್ತದವರೆಗೆ ಎಲ್ಲಾ ವಾಹನಗಳನ್ನು ಏಕಮುಖ ಸಂಚಾರವಾಗಿ ಬಿಡಲಾಗುವುದು (ಪಶ್ಚಿಮದಿಂದ ಪೂರ್ವದ ಕಡೆಗೆ) ಹಾಗೂ ಆಲಿ ಆಸ್ಕರ್ ರಸ್ತೆ-ಎಲ್ಲಾ ತರಹದ ವಾಹನ ಸಂಚಾರವನ್ನು ಇನ್‌ಫೆಂಟ್ರಿ ರಸ್ತೆ ಜಂಕ್ಷನ್‌ನಿಂದ ರಾಜಭವನ ವೃತ್ತದ ಕಡೆ ಸಂಚಾರವನ್ನು ನಿಷೇಧಿಸಲಾಗಿದೆ (ಉತ್ತರದಿಂದ ದಕ್ಷಿಣದ ಕಡೆಗೆ) ಮತ್ತು ಇನ್‌ಫೆಂಟ್ರಿ ರಸ್ತೆ - ಎಲ್ಲಾ ತರಹದ ವಾಹನ ಸಂಚಾರವನ್ನು ಏಕಮುಖ ಸಂಚಾರವಾಗಿ ಪಶ್ಚಿಮದಿಂದ ಪೂರ್ವದ ಕಡೆಗೆ ಬಿಡಲಾಗುವುದು. ಹಾಗೂ ಹಾಲಿ ಸಂಚಾರ ವ್ಯವಸ್ಥೆ ಇರುವ ಸಿ.ಟಿ.ಓ ವೃತ್ತದಿಂದ ಇನ್‌ಫೆಂಟ್ರಿ ರಸ್ತೆ ಜಂಕ್ಷನ್ ವರೆಗೆ (ದಕ್ಷಿಣದಿಂದ ಉತ್ತರದ ಕಡೆಗೆ) ಬರುವ ಎಲ್ಲಾ ತರಹದ ವಾಹನ ಸಂಚಾರವನ್ನು ನಿಷೇಧಿಸಲಾಗಿದೆ. ಪ್ಯಾಲೆಸ್ ರಸ್ತೆಯಲ್ಲಿ - ಬಸವೇಶ್ವರ ವೃತ್ತದಿಂದ ಹೈಗ್ರೌಂಡ್ಸ್ ಪೊಲೀಸ್ ಠಾಣೆ ವೃತ್ತದ ವರೆಗೆ ಹಾಗೂ ಇನ್‌ಫೆಂಟ್ರಿ ರಸ್ತೆಯಲ್ಲಿ - ಆಲಿ ಆಸ್ಕರ್ ರಸ್ತೆಯಿಂದ ಕ್ವೀನ್ಸ್ ರಸ್ತೆಯವರೆಗೆ ಎರಡು ದಿಕ್ಕಿನಲ್ಲಿ ಎಲ್ಲಾ ತರಹದ ವಾಹನ ನಿಲುಗಡೆಯನ್ನು ನಿಷೇಧಿಸಲಾಗಿದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರ ಪ್ರಕಾರ ನನ್ನ ಅಧಿಕಾರ ವ್ಯಾಪ್ತಿಯಲ್ಲಿರುವ ಅಧಿಕಾರವನ್ನು ಚಲಾಯಿಸಿ ಎಸ್.ಮರಿಸ್ವಾಮಿ, ಐ.ಪಿ.ಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡ ನಿಬಂಧನೆಗಳನ್ನು ಆದೇಶಿಸಿರುತ್ತೇನೆ.

| | | | |
|---|---|---|---|
| 1. | ರಾಜಭವನ ರಸ್ತೆ | - | ಏಕ ಮುಖ ಸಂಚಾರ, ಪೂರ್ವದಿಂದ ಪಶ್ಚಿಮದ ಕಡೆಗೆ (ಸಿ.ಟಿ.ಓ. ವೃತ್ತದಿಂದ ಬಸವೇಶ್ವರ ವೃತ್ತದ ಕಡೆಗೆ) |
| 2. | ಟಿ. ಚೌಡಯ್ಯ ರಸ್ತೆ | - | ಏಕ ಮುಖ ಸಂಚಾರ, ಪಶ್ಚಿಮದಿಂದ ಪೂರ್ವದ ಕಡೆಗೆ (ಹೈಗ್ರೌಂಡ್ಸ್ ಪಿ.ಎಸ್ ವೃತ್ತದಿಂದ ರಾಜಭವನ ವೃತ್ತದವರೆಗೆ) |
| 3. | ಆಲಿ ಆಸ್ಕರ್ ರಸ್ತೆ | - | ಏಕ ಮುಖ ಸಂಚಾರ, ದಕ್ಷಿಣದಿಂದ ಉತ್ತರದ ಕಡೆಗೆ (ರಾಜಭವನ ವೃತ್ತದಿಂದ ಇನ್‌ಫೆಂಟ್ರಿ ರಸ್ತೆ ಜಂಕ್ಷನ್‌ವರೆಗೆ) |
| 4. | ಇನ್‌ಫೆಂಟ್ರಿ ರಸ್ತೆ | - | ಏಕ ಮುಖ ಸಂಚಾರ, ಪಶ್ಚಿಮದಿಂದ ಪೂರ್ವದ ಕಡೆಗೆ (ಆಲಿ ಆಸ್ಕರ್ ರಸ್ತೆ ಜಂಕ್ಷನ್‌ನಿಂದ ಕ್ವೀನ್ಸ್ ರಸ್ತೆ ವರೆಗೆ) |
| 5. | ಎಲ್.ಆರ್.ಡಿ.ಇ ಜಂಕ್ಷನ್ | - | ಹೈಗ್ರೌಂಡ್ಸ್ ವೃತ್ತದ ಕಡೆಯಿಂದ ಬರುವ ಎಲ್ಲಾ ವಾಹನಗಳ ಬಲ ತಿರುವನ್ನು ನಿಷೇಧಿಸಲಾಗಿರುತ್ತದೆ. (ಚೌಡಯ್ಯ ರಸ್ತೆಯಿಂದ ಬಸವೇಶ್ವರ ವೃತ್ತದ ಕಡೆಗೆ) |

6. ಪ್ಯಾಲೇಸ್ ರಸ್ತೆ - ವಾಹನ ನಿಲುಗಡೆ ನಿಷೇಧ
(ಬಸವೇಶ್ವರ ವೃತ್ತದಿಂದ ಹೈಗ್ರೌಂಡ್ಸ್ ಪಿ.ಎಸ್. ವೃತ್ತದ ವರೆಗೆ ಎರಡೂ ದಿಕ್ಕಿನಲ್ಲಿ)
7. ಇನ್‌ಫೆಂಟ್ರಿ ರಸ್ತೆ - ವಾಹನ ನಿಲುಗಡೆ ನಿಷೇಧ.
(ಆಲಿ ಆಸ್ಕರ್ ರಸ್ತೆಯಿಂದ ಕ್ವೀನ್ಸ್ ರಸ್ತೆವರೆವಿಗೆ ಎರಡೂ ದಿಕ್ಕಿನಲ್ಲಿ)

ಈ ಆದೇಶವನ್ನು ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ನಿರ್ಬಂಧನೆಗಳನ್ನು ಜಾರಿಗೊಳಿಸಲು ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸಹ ಆದೇಶಿಸಿರುತ್ತೇನೆ.

ಈ ಆದೇಶವನ್ನು ಖಾಯಂ ಆಗಿ ಮುಂದುವರಿಸಲು ದಿನಾಂಕ: 05-01-2004 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ಜಾರಿಗೆ ತರಲು ಆದೇಶ ನೀಡಿರುತ್ತೇನೆ.

ಎಸ್. ಮರಿಸ್ವಾಮಿ
ಪಿ.ಆರ್. 1418 ಪೊಲೀಸ್ ಕಮೀಷನರ್, ಬೆಂಗಳೂರು ನಗರ

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ಇವರ ಕಛೇರಿ ನಡವಳಿಕೆಗಳು

## ಅಮಲ್ಜಾರಿ ಅರ್ಜಿ ಸಂಖ್ಯೆ:17:2003-04

**ಡಿಕ್ರಿ ಹೋಲ್ಡರ್**
ಪ್ರಧಾನ ವ್ಯವಸ್ಥಾಪಕರು,
ಟೌನ್ ಕೋ ಆಪರೇಟಿವ್ ಬ್ಯಾಂಕ್ ಲಿ., ಶಿರಾ, ತುಮಕೂರು ಜಿಲ್ಲೆ.

**ತೀರ್ಪು ಋಣಿ**
ಎಂ.ಡಿ. ಜನ್ಮುದ್ದೀನ್ ಬಿನ್ ಎಂ.ಡಿ. ದಸ್ತಗಿರಿಸಾಬ್,
ಜುಮ್ಮಮಸೀದಿ ಎದುರು, ಶಿರಾ.

**ಪ್ರಸ್ತಾವನೆ:**

ಪ್ರಧಾನ ವ್ಯವಸ್ಥಾಪಕರು, ಟೌನ್ ಕೋ ಆಪರೇಟಿವ್ ಬ್ಯಾಂಕ್ ಲಿ., ಶಿರಾ ಇವರು ತೀರ್ಪು ಋಣಿಯಿಂದ ವಸೂಲಾಗಬೇಕಾದ ಆಧಾರದ ಸಾಲ ರೂ.42,220-00 ದಾವಾ ಶುಲ್ಕ ರೂ. 420-00 ಒಟ್ಟು 42,640-00 ಮತ್ತು ಮುಂದುವರಿದ ಬಡ್ಡಿ, ಇತರೆ ಖರ್ಚುಗಳಿಗೆ ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಇವರ ನ್ಯಾಯಾಲಯದಲ್ಲಿ ದಾವಾ ಹೂಡಿ ಡಿಕ್ರಿ ಪಡೆದು ಅಮಲ್ಜಾರಿ ಅರ್ಜಿ ಹಾಕಿದ್ದು ಸದರಿ ಅಮಲ್ಜಾರಿ ಅರ್ಜಿ ಸಂಖ್ಯೆ:17:2003-04 ಮೊಬಲಗು ರೂ. 49,200-00 ಪ್ರಕರಣವನ್ನು ಸದರಿ ಬ್ಯಾಂಕಿನ ಮಾರಾಟಾಧಿಕಾರಿ ನಿಯಮ-441 ರವರಿಗೆ ಅಮಲ್ಜಾರಿಗೆ ವಹಿಸಲಾಗಿತ್ತು.

ಸದರಿ ಮಾರಾಟಾಧಿಕಾರಿಗಳು ತೀರ್ಪು ಋಣಿಯ ಸ್ಥಿರ ಸ್ವತ್ತುಗಳನ್ನು ದಿ:29-7-2003 ರಂದು ಬಹಿರಂಗ ಹರಾಜಿನಲ್ಲಿ ಅತ್ಯಧಿಕ ಬಿಡ್ಡುದಾರರಾದ ಶ್ರೀ ಹಬೀಬ್ ಬಿನ್ ಲೇಟ್ ಮೊಹಮದ್ ಉಸ್ಮಾನ್ ಖರಾದಿ ಮೊಹಲ್ಲಾ, ಶಿರಾ ಟೌನ್ ವಾಸಿ ಇವರಿಗೆ ರೂ. 81,000-00 (ರೂಪಾಯಿಗಳು ಎಂಬತ್ತೊಂದು ಸಾವಿರ ಮಾತ್ರ)ಗಳಿಗೆ ಮಾರಾಟ ಮಾಡಿ ಹರಾಜು ಸ್ಥಿರೀಕರಣಕ್ಕಾಗಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಮೊಬಲಗಿನಲ್ಲಿ ಬಿಡ್ ಮೊತ್ತ ರೂ. 81,000-00 ಗಳಲ್ಲಿ ಡಿಕ್ರಿ ಹೋಲ್ಡರ್ ಬ್ಯಾಂಕಿಗೆ ದಿ: 29-7-2003ಕ್ಕೆ ಇದ್ದಂತೆ ಬರಬೇಕಾಗಿದ್ದ ರೂ. 53,600-00 ಗಳನ್ನು ಜಮಾ ಮಾಡಿಕೊಂಡು ಉಳಿದ ರೂ. 27,400-00 ಗಳನ್ನು ತೀರ್ಪು ಋಣಿದಾರರಿಗೆ ಚಲನ್ ನಂ. 269, ದಿ: 14-10-2003ರ ರೀತಿ ವಾಪಸ್ ಮಾಡಿರುವುದಾಗಿ ಬ್ಯಾಂಕಿನ ಪ್ರಧಾನ ವ್ಯವಸ್ಥಾಪಕರು ತಿಳಿಯಪಡಿಸಿರುತ್ತಾರೆ. ಸದರಿ ಷೆಡ್ಯೂಲ್ ಸ್ವತ್ತು ಹರಾಜದ 30 ದಿವಸಗಳ ಒಳಗೆ ಆಸ್ತಿಯ ಒಡೆತನವನ್ನು ಹೊಂದಿರುವ ಅಥವಾ ಆಸ್ತಿಯಲ್ಲಿ ಹಿತಾಸಕ್ತಿ ಹೊಂದಿರುವ ವ್ಯಕ್ತಿಗಳಿಂದ ನಿಯಮ 38(4)(ಎ) ರೀತಿ ನಿಯಮಾನುಸಾರ ಠೇವಣಿ ಮಾಡಿ ಮಾರಾಟವನ್ನು ರದ್ದುಗೊಳಿಸುವಂತೆ ಕೋರಿ ಯಾವ ವಿಧವಾದ ಅರ್ಜಿಯು ಬಂದಿಲ್ಲದ ಪ್ರಯುಕ್ತ ಸದರಿ ಸ್ಥಿರಾಸ್ತಿಯನ್ನು ಅತ್ಯಧಿಕ ಹಾಗೂ ಅಂತಿಮ ಬಿಡ್‌ದಾರರ ಹೆಸರಿಗೆ ಸ್ಥಿರೀಕರಣಗೊಳಿಸಬೇಕಾಗಿದೆ ಆದುದರಿಂದ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

## ಆದೇಶ

## ನಂ. ಸ.ಸಂ.ಸ.ನಿ.33:ಎಬಿಎನ್:ಇಎಕ್ಸ್‌ಎನ್:ಎಸ್.ಸಿ:56:2003-04, ದಿನಾಂಕ: 3ನೇ ಡಿಸೆಂಬರ್ 2003

ಟಿ. ಮುರಳಿಕೃಷ್ಣಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಬಂಧನೆಗಳ 1960 ನಿಯಮ 38(6)ಎ. ಪ್ರಕಾರ ನನಗೆ ದತ್ತವಾಗಿರುವ ಅಧಿಕಾರದ ಮೇರೆಗೆ ಟೌನ್ ಕೋ ಆಪರೇಟಿವ್ ಬ್ಯಾಂಕ್ ಲಿ., ಶಿರಾ ಇವರಿಗೆ ತೀರ್ಪು ಋಣಿಗಳಾದ ಎಂ.ಡಿ. ನಜ್ಮುದ್ದೀನ್ ಬಿನ್ ಎಂ.ಡಿ. ದಸ್ತಗಿರಿಸಾಬ್, ಜುಮ್ಮ ಮಸೀದಿ ಎದುರು, ಶಿರಾ ಎಂಬುವರ ಷೆಡ್ಯೂಲ್‌ನಲ್ಲಿ ವಿವರಿಸಲಾದ ಸ್ಥಿರಾಸ್ತಿಗಳನ್ನು ದಿ: 29-7-03 ರಂದು ನಡೆದ ಬಹಿರಂಗ ಹರಾಜಿನಲ್ಲಿ ಅತ್ಯಧಿಕ ಬಿಡ್‌ದಾರರಾದ ಶ್ರೀ ಹಬೀಬ್ ಬಿನ್ ಲೇಟ್ ಮೊಹಮದ್ ಉಸ್ಮಾನ್ ಖರಾದಿ ಮೊಹಲ್ಲಾ, ಶಿರಾ ಟೌನ್ ವಾಸಿ ಇವರಿಗೆ ಸ್ಥಿರೀಕರಿಸಿ ಆದೇಶಿಸಿರುತ್ತೇನೆ.

ಬಹಿರಂಗ ಹರಾಜಿನಲ್ಲಿ ಬಿಡ್ಡುದಾರ ಹಬೀಬ್ ಡಿಕ್ರಿ ಹೋಲ್ಡರ್ ಬ್ಯಾಂಕಿಗೆ ಪಾವತಿಸಿದ ರೂ. 81,000-00 ಗಳಲ್ಲಿ ಡಿಕ್ರಿ ಹೋಲ್ಡರ್ ಬ್ಯಾಂಕ್ ಮಾರಾಟದ ಘೋಷಣೆಯಲ್ಲಿ ಯಾವ ಮೊಬಲಗಿನ ಸಲುವಾಗಿ ಮಾರಾಟವು ಆದೇಶ ಮಾಡಲ್ಪಟ್ಟಿತೋ ಆ ಮೊಬಲಗನ್ನು ಮತ್ತು ಅದರ ಮೇಲಿನ ಬಡ್ಡಿ ಮತ್ತು ಜಪ್ತಿ ವೆಚ್ಚಗಳನ್ನು ತೀರ್ಪು ಋಣಿ ಎಂ.ಡಿ. ನಜ್ಮುದ್ದೀನ್ ಬಿನ್ ಎಂ.ಡಿ. ದಸ್ತಗಿರಿಸಾಬ್,

ಜುಮ್ಮಾ ಮಸೀದಿ ಎದುರು, ಶಿರಾ ಇವರ ಸಾಲದ ಖಾತೆಗೆ ಜಮಾ ತೆಗೆದುಕೊಂಡು ಲೆಕ್ಕ ಮಾಡಿಕೊಳ್ಳಲು ಮತ್ತು ಬಿಡ್‌ನಿಂದ ಹೆಚ್ಚುವರಿಯಾಗಿ ಉಳಿದ ಹಣವನ್ನು ತೀರ್ಪು ಋಣಿಯವರಿಗೆ ದಿ: 14-10-2003 ರಂದು ವೋಚರ್ ನಂ. 269 ರಲ್ಲಿ ಪಾವತಿಸಿರುವುದನ್ನು ಒಪ್ಪಿಕೊಂಡಿರುತ್ತದೆ.

**ಟಿ. ಮುರುಳಿಕೃಷ್ಣಪ್ಪ**
ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಮಧುಗಿರಿ ಉಪವಿಭಾಗ, ಮಧುಗಿರಿ.

**ಸ್ಥಿರ ಸ್ವತ್ತುಗಳ ವಿವರ**

ಶಿರಾ ಟೌನ್ ಖರಾದಿ ಮೊಹಲ್ಲಾ, ಖಾನೆಷುಮಾರಿ ನಂ. 515:3180:2827ರಲ್ಲಿರುವ ಅಳತೆ 36x20 ಅಡಿಗಳು, ಮನೆಯ ಸ್ವತ್ತಿಗೆ ಚೆಕ್ಕುಬಂದಿ.

ಪೂರ್ವಕ್ಕೆ - ಗಲ್ಲಿ, ಪಶ್ಚಿಮಕ್ಕೆ ಖಲೀಲ್ ಯಾಸಿನ್ ವಾಸದ ಮನೆ, ಉತ್ತರಕ್ಕೆ ಮದೀನ್ ಗೌಸ್ ಮನೆ,

ದಕ್ಷಿಣಕ್ಕೆ - ಗಲ್ಲಿ.

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿ ಮೊಹರಿನೊಂದಿಗೆ 2003ನೇ ಇಸವಿ ಡಿಸೆಂಬರ್ ತಿಂಗಳು 3ನೇ ತಾರೀಖಿನಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಮಧುಗಿರಿ ಉಪವಿಭಾಗ, ಮಧುಗಿರಿ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ಇವರ ನಡವಳಿಕೆಗಳು**

**ಕರ್ನಾಟಕ ಸಹಕಾರಿ ಸಂಘಗಳ ನಿಯಮಗಳು 1960ರ ನಿಯಮ 38(7)ರನ್ವಯ ನೀಡಿದ ಮಾರಾಟ ದೃಢೀಕರಣ ಪತ್ರ**

**ಅಮಲ್ಜಾರಿ ಅರ್ಜಿ ಸಂಖ್ಯೆ:17:2003-04**

**ಉಪಸ್ಥಿತರು:** ಶ್ರೀ ಮುರಳಿಕೃಷ್ಣಪ್ಪ,
ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ.

**ಡಿಕ್ರಿ ಹೋಲ್ಡರ್:** ಪ್ರಧಾನ ವ್ಯವಸ್ಥಾಪಕರು,
ಟೌನ್ ಕೋ ಆಪರೇಟಿವ್ ಬ್ಯಾಂಕ್ ಲಿ., ಶಿರಾ, ತುಮಕೂರು ಜಿಲ್ಲೆ.

**ತೀರ್ಪುಋಣಿ:** ಶ್ರೀ ಎಂ.ಡಿ. ನಜ್ಮುದ್ದೀನ್ ಬಿನ್ ಎಂ.ಡಿ. ದಸ್ತಗಿರಿಸಾಬ್,
ಜುಮ್ಮಮಸೀದಿ, ಎದುರು, ಶಿರಾ ಟೌನ್.

ಟೌನ್ ಕೋ ಆಪರೇಟಿವ್ ಬ್ಯಾಂಕ್ ಲಿ. ಶಿರಾ, ತುಮಕೂರು ಜಿಲ್ಲೆ, ಇವರು ದಿನಾಂಕ:6-11-02 ರಂದು ಪಡೆದ ಡಿಕ್ರಿ ನಂ. ಜೆಆರ್‌ಬಿ:2702:2002-03ರ ಪ್ರಕಾರ ದಿ: 30-4-2003 ರಂದು ಸಿಇಪಿ ನಂ. 17:2003-04ರ ಪ್ರಕಾರ ಅಮಲ್ಜಾರಿ ಪಡೆದು ಡಿಕ್ರಿಹೋಲ್ಡರ್ ಬ್ಯಾಂಕಿನ ಮಾರಾಟಾಧಿಕಾರಿಯು ಮೇಲ್ಕಂಡ ಸುಸ್ತಿದಾರರಾದ ಶ್ರೀ ಎಂ.ಡಿ. ನಜ್ಮುದ್ದೀನ್ ಬಿನ್ ಎಂ.ಡಿ. ದಸ್ತಗಿರಿಸಾಬ್, ಜುಮ್ಮಮಸೀದಿ ಎದುರು, ಶಿರಾ ಟೌನ್ ಇವರು ಡಿಕ್ರಿ ಹೋಲ್ಡರ್ ಬ್ಯಾಂಕಿಗೆ ಆದಾರ ಮಾಡಿದ್ದ ಈ ಕೆಳಕಂಡ ಸ್ಥಿರಾಸ್ತಿಯನ್ನು ತಾ: 29-7-2003ರಂದು ಟೌನ್ ಕೋ ಆಪರೇಟಿವ್ ಬ್ಯಾಂಕ್ ಲಿ., ಶಿರಾ ಈ ಬ್ಯಾಂಕಿಗೆ ಬರಬೇಕಾದ ಸುಸ್ತಿ ಸಾಲದ ವಸೂಲಿ ಬಗ್ಗೆ ಬಹಿರಂಗ ಹರಾಜು ನಡೆಸಿರುತ್ತಾರೆ.

ಈ ಹರಾಜಿನಲ್ಲಿ ತೀರ್ಪುಋಣಿಯ ಸ್ಥಿರ ಸ್ವತ್ತನ್ನು ಶ್ರೀ ಹಬೀಬ್ ಬಿನ್ ಲೇಟ್ ಮೊಹಮದ್ ಉಸ್ಮಾನ್ ಖರಾದಿ ಮೊಹಲ್ಲಾ, ಶಿರಾ ಟೌನ್ ವಾಸಿ ಇವರು ರೂ.81,000-00 (ರೂಪಾಯಿಗಳು ಎಂಬತ್ತೊಂದು ಸಾವಿರ ಮಾತ್ರ)ಗಳ ಅತಿ ಹೆಚ್ಚಿನ ಬಿಡ್ ಮೊತ್ತಕ್ಕೆ ಕೊಂಡಿರುತ್ತಾರೆ ಮತ್ತು ಬಿಡ್ ಮೊತ್ತ ರೂ. 81,000-00 ಗಳಲ್ಲಿ ಬ್ಯಾಂಕಿನ ಸಾಲ ರೂ. 53,600-00 ಬ್ಯಾಂಕಿಗೆ ಜಮ ಮಾಡಿಕೊಂಡು ಉಳಿದ ಹಣ ರೂ.27,400-00ಗಳನ್ನು ತೀರ್ಪು ಋಣಿದಾರರಿಗೆ ಚಲನ್ ನಂ.269 ದಿ:14-10-2003ರ ರೀತಿ ವಾಪಸ್ ಕೊಟ್ಟಿರುತ್ತಾರೆ ಎಂದು ಈ ಮೂಲಕ ದೃಢೀಕರಿಸಿದೆ. ಆದ್ದರಿಂದ ಈ ಸ್ಥಿರಾಸ್ತಿಯ ಹರಾಜನ್ನು ಬಿಡ್‌ದಾರರಾದ ಶ್ರೀ ಹಬೀಬ್ ಬಿನ್ ಲೇಟ್ ಮೊಹಮದ್ ಉಸ್ಮಾನ್, ಖರಾದಿ ಮೊಹಲ್ಲಾ, ಶಿರಾ ಟೌನ್ ಇವರ ಹೆಸರಿಗೆ ಸ್ಥಿರೀಕರಣಗೊಳಿಸಿದೆ.

**ಸ್ಥಿರಾಸ್ತಿಯ ವಿವರ**

| ಗ್ರಾಮ ಮತ್ತು ತಾಲ್ಲೂಕು | ಸ್ಥಿರ ಸ್ವತ್ತುಗಳ ವಿವರ ತರಹೆ | ಖಾನೇಷು ಮಾರಿ ನಂ. | ಖಾತೆದಾರನ: ಹಕ್ಕುದಾರನ ಹೆಸರು | ವಿಸ್ತೀರ್ಣ | ಚೆಕ್ಕುಬಂದಿ |
|---|---|---|---|---|---|
| ಖರಾದಿಮೊಹಲ್ಲಾ ಶಿರಾ ಟೌನ್ | ಕರೇ ಹೆಂಚಿನ ಹಳೆ ಮನೆ | 515:3180 2827 | ಎಂ ಡಿ ನಜ್ಮುದ್ದೀನ್ ಬಿನ್ ಎಂ.ಡಿ. ದಸ್ತಗಿರಿ ಸಾಬ್, ಜುಮ್ಮಮಸೀದಿ ಎದುರು, ಶಿರಾ. | 36x20 ಅಡಿಗಳು | ಪೂರ್ವ-ಗಲ್ಲಿ<br>ಪಶ್ಚಿಮ-ಖಲೀಲ್ ಯಾಸೀನ್ ವಾಸದ ಮನೆ<br>ಉತ್ತರ-ಮದೀನ್‌ಗೌಸ್ ಮನೆ<br>ದಕ್ಷಿಣ-ಗಲ್ಲಿ |

ಮಾರಾಟದ ಮೊತ್ತ ರೂ.81,000-00, ಬ್ಯಾಂಕಿನ ಸಾಲ ತೀರಿಸಿದ್ದು, ರೂ.53,600-00 ಬಾಕಿ ಮೊತ್ತವನ್ನು ತೀರ್ಪುಖಣಿಗೆ ಪಾವತಿಸಿದ್ದು ರೂ.27,400-00, ಮಾರಾಟ ದಿ:29-7-03 ಛಾಪಾ ಕಾಗದದ ಮೌಲ್ಯ ರೂ. 7128-00 ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿ ಮೊಹರಿನೊಂದಿಗೆ ದಿ:3-12-03ರಂದು ನೀಡಿರುತ್ತೇನೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ.

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ಇವರ ಕಛೇರಿ ನಡವಳಿಕೆಗಳು**

**ಫಾರಂ ನಂ-11 (ಆರ್ ಸಿ ಎಸ್-54) (38ನೇ ರೂಲಿನ (7)ನೆಯ ಕಾಲಂ)**

**ಸ್ಥಿರ ಸ್ವತ್ತುಗಳನ್ನು ಕೊಂಡಿದ್ದಕ್ಕೆ ಪ್ರಕಟಣೆ**

ತುಮಕೂರು ಜಿಲ್ಲಾ, ಶಿರಾ ಟೌನ್ ಖಾರಾದಿ ಮೊಹಲ್ಲಾ ಬಡಾವಣೆಯಲ್ಲಿರುವ ಶ್ರೀ ಹಬೀಬ್ ಬಿನ್ ಲೇಟ್ ಮೊಹಮದ್ ಉಸ್ಮಾನ್, ಖರಾದಿ ಮೊಹಲ್ಲಾ, ಶಿರಾ ಟೌನ್ ಇವರು ಈ ಕೆಳಗೆ ತೋರಿಸಿದ ಸ್ಥಿರ ಸ್ವತ್ತುಗಳನ್ನು ಬಹಿರಂಗ ಹರಾಜಿನಲ್ಲಿ 2003ನೇ ಇಸವಿ ಜುಲೈ ತಿಂಗಳ 29ನೇ ತಾರೀಖಿನಲ್ಲಿ ಕ್ರಯಕ್ಕೆ ಪಡೆದುಕೊಂಡಿದ್ದಾರಾಗಿಯೂ ಮತ್ತು ದರಖಾಸ್ತು ಹಣ ರೂ. 81,000-00 (ಅಕ್ಷರದಲ್ಲಿ ಎಂಬತ್ತೊಂದು ಸಾವಿರ ರೂ.ಗಳು ಮಾತ್ರ)ಗಳನ್ನು ಸಂಪೂರ್ಣವಾಗಿ ಪಾವತಿ ಮಾಡಿದ್ದರಾಗಿಯೂ, ಈ ಮೂಲಕ ಎಲ್ಲಾ ಜನರಿಗೆ ಬಹಿರಂಗವಾಗಿ ತಿಳಿಸಲಾಗಿರುತ್ತದೆ. ಪ್ರಯುಕ್ತ ಸ್ಥಿರ ಸ್ವತ್ತುಗಳಲ್ಲಿರುವ ಖಾತೆದಾರನ ಎಲ್ಲಾ ಹಕ್ಕು-ವ-ಪ್ರಯೋಜನಗಳಿಗೆ ಸದರಿ ಹಬೀಬ್ ಬಿನ್ ಲೇಟ್ ಮೊಹಮ್ಮದ್ ಉಸ್ಮಾನ್, ಇವರು ಉತ್ತರಾಧಿಕಾರಿಯಾಗಿದ್ದಾರೆ ಎಂಬುದಾಗಿ ಈ ಮೂಲಕ ದೃಢೀಕರಿಸಲಾಗಿದೆ.

| ಗ್ರಾಮ ಮತ್ತು ತಾಲ್ಲೂಕು | ಸ್ಥಿರ ಸ್ವತ್ತುಗಳ ವಿವರ ತರಹೆ | ಖಾನೇಷು ಮಾರಿ ನಂ. | ಖಾತೆದಾರನ: ಹಕ್ಕುದಾರನ ಹೆಸರು | ವಿಸ್ತೀರ್ಣ | ಚೆಕ್ಕುಬಂದಿ |
|---|---|---|---|---|---|
| ಖರಾದಿಮೊಹಲ್ಲಾ ಶಿರಾ ಟೌನ್ | ಕರೇ ಹೆಂಚಿನ ಹಳೆ ಮನೆ | 515:3180 2827 | ಎಂ ಡಿ ನಜ್ಮುದ್ದೀನ್ ಬಿನ್ ಎಂ.ಡಿ. ದಸ್ತಗಿರಿ ಸಾಬ್, ಜುಮ್ಮಮಸೀದಿ ಎದುರು, ಶಿರಾ ಟೌನ್. | 36x20 ಅಡಿಗಳು | ಪೂರ್ವ-ಗಲ್ಲಿ<br>ಪಶ್ಚಿಮ-ಖಲೀಲ್ ಯಾಸೀನ್ ವಾಸದ ಮನೆ<br>ಉತ್ತರ-ಮದೀನ್‌ಗೌಸ್ ಮನೆ<br>ದಕ್ಷಿಣ-ಗಲ್ಲಿ |

ಸ್ಥಳ:- ಮಧುಗಿರಿ
ದಿನಾಂಕ:3-12-2003
ಪಿ.ಆರ್. 1419

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಮಧುಗಿರಿ ಉಪವಿಭಾಗ, ಮಧುಗಿರಿ.

**ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ**

**ಕಾರ್ಯನಿರ್ವಾಹಕ ಇಂಜಿನಿಯರ್ (ವಿ.) ಅವರ ಕಛೇರಿ, ಬೃಹತ್ ಕಾಮಗಾರಿ ವಿಭಾಗ,**

**ಅಂಚೆ ಪೆಟ್ಟಿಗೆ ಸಂಖ್ಯೆ 206, ಹದಡಿ ರಸ್ತೆ, ದಾವಣಗೆರೆ - 577 002**

**ಪ್ರಕಟಣೆ**

**ಕ್ರಮಾಂಕ: ಕಾನಿಇಂ(ವಿ):ಬೃಕಾವಿ:ದಾ:ಸಕಾನಿಇಂ(ಕ):3122-23, ದಿನಾಂಕ: 10ನೇ ಡಿಸೆಂಬರ್ 2003**

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ 1948ರ ವಿದ್ಯುತ್ ಶಕ್ತಿ ಸರಬರಾಜು ಅಧಿನಿಯಮದ ಪ್ರಕರಣದ ಭರ್ತಿ ಅನ್ವಯ ಯೋಜನೆಗಳನ್ನು ರೂಪಿಸಿದೆ. ಹಾಗೂ ಸದರಿ ನಿಯಮದ ಪ್ರಕರಣ 29 (2)ರ ಅನ್ವಯ ಈ ಮೂಲಕ ಯೋಜನೆಗಳನ್ನು ಸಾರ್ವಜನಿಕರ ತಿಳುವಳಿಕೆಗಾಗಿ ಪ್ರಕಟಿಸುತ್ತಿದೆ. ಯೋಜನೆಗಳ ವಿವರಗಳು ಈ ರೀತಿ ಇವೆ.

1) **ಯೋಜನೆಯ ಹೆಸರು:** ಮೆ:ಸುಭಾಷ್ ಪ್ರಾಜೆಕ್ಟ್ ಮತ್ತು ಮಾರ್ಕೆಟಿಂಗ್ ಲಿಮಿಟೆಡ್ ರವರು ಉತ್ಪಾದಿಸುತ್ತಿರುವ ಪವನ್ ಶಕ್ತಿಯನ್ನು ಬೆಟ್ಟದನಾಗೇನಹಳ್ಳಿಯಿಂದ ಪಂಡರಹಳ್ಳಿ 66:11 ಕೆ.ವಿ. ವಿದ್ಯುತ್ ಕೇಂದ್ರದವರೆಗೆ ಸಾಗಿಸಲು 66 ಕೆ.ವಿ.ಎಸ್.ಸಿ.ಲೈನ್ ಮಾರ್ಗ ನಿರ್ಮಾಣ ಮಾಡುವುದು.

2) **ಯೋಜನೆಯ ಪ್ರಯೋಜನಗಳು:** ಚಿತ್ರದುರ್ಗ ಜಿಲ್ಲೆ, ಹೊಳಲ್ಕೆರೆ ತಾಲ್ಲೂಕು ಚಿತ್ರದುರ್ಗ ತಾಲ್ಲೂಕು ಗ್ರಾಹಕರಿಗೆ ಉತ್ತಮ ಒತ್ತಡದ ವಿದ್ಯುತ್ ಸರಬರಾಜು ಮಾಡುವುದು.

3) **ಹಾದು ಹೋಗುವ ಹಳ್ಳಿಗಳು:** ಚಿತ್ರದುರ್ಗ ಬೆಟ್ಟದನಾಗೇನಹಳ್ಳಿ, ಹುಲ್ಲೂರು, ಸಿಂಗಪುರ, ಜಾನಕೊಂಡ್ ಹಳ್ಳಿಗಳ ಸರಹದ್ದು.

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ ಮೇಲೆ ತಿಳಿಸಿರುವ ಯೋಜನೆಗಳನ್ನು ಕಾರ್ಯಗೊಳಿಸಲು 1885ರ ಭಾರತೀಯ ಟೆಲಿಗ್ರಾಫ್ ಅಧಿನಿಯಮ ಭಾಗ-3ರ ಕೇಂದ್ರಿಯ ಕಾಯ್ದೆ 1985ರ (13)ರ ಅನ್ವಯ ಟೆಲಿಗ್ರಾಫ್ ಪ್ರಾಧಿಕಾರಿಗಳು ಹೊಂದಿರುವ ಎಲ್ಲಾ ಅಧಿಕಾರಗಳನ್ನು ಹೊಂದಿರುತ್ತದೆ. ಸದರಿ ಯೋಜನೆಗಳಿಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ನಿಗಮದ ಪರಿಗಣನೆಗಾಗಿ ಆಕ್ಷೇಪಣೆಗಳನ್ನು ಈ ಪ್ರಕಟಣೆ ಪ್ರಕಟವಾದ ಒಂದು ತಿಂಗಳ ಒಳಗೆ ಕಾರ್ಯನಿರ್ವಾಹಕ ಇಂಜಿನಿಯರ್ (ವಿ), ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ, ಆರ್.ಹೆಚ್. ಬಿಲ್ಡಿಂಗ್, ಪಿ.ಬಿ. ರಸ್ತೆ, ದಾವಣಗೆರೆ ಇವರಿಗೆ ಕಳುಹಿಸುವುದು.

ಕಾರ್ಯನಿರ್ವಾಹಕ ಇಂಜಿನಿಯರ್(ವಿ) ಬೃ.ಕಾ.ವಿಭಾಗ,
ಕವಿಪ್ರನಿನಿ, ದಾವಣಗೆರೆ.

ಪಿ.ಡಿ. 1

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ**
**ಸಂ:ಕಾಪಕಾ:ಎಫ್:ಎಸ್‌ಆರ್-21:2003**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

1. ಶ್ರೀಮತಿ ಸುಬ್ಬಮ್ಮ ಕೋಂ ಲೇಟ್ ಸೋಮೇಗೌಡ 60 ವರ್ಷ ವಯಸ್ಸು, ಹೊನ್ನಾವರ ಗ್ರಾಮ ಮತ್ತು ಅಂಚೆ, ದುದ್ದ (ಆರ್.ಎಸ್.) ಹೋಬಳಿ, ಹಾಸನ ತಾಲ್ಲೂಕು.

1. ಶ್ರೀ ವಿ. ಪ್ರಕಾಶ್ ಬಿನ್ ಆರ್. ವೇಣುಗೋಪಾಲ್, ನಂ.9:1, 6ನೇ ಮುಖ್ಯರಸ್ತೆ, 6ನೇ ಅಡ್ಡರಸ್ತೆ, ಶ್ರೀ ಕಂಠೇಶ್ವರ ನಗರ, ಬೆಂಗಳೂರು-96.
2. ದಿ ಮ್ಯಾನೇಜರ್, ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂಪನಿ ಲಿಮಿಟೆಡ್, ಪೀಣ್ಯ ಬ್ರಾಂಚ್, ಜಾಲಹಳ್ಳಿ ವೃತ್ತ, ಬೆಂಗಳೂರು.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಕೃಷ್ಣೇಗೌಡ ಉರುಫ್ ಸಣ್ಣಸ್ವಾಮಿ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ 24-3-2003 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್. ಗೋಪಾಲಗೌಡ**

ಪಿ.ಆರ್. 1420 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಹಾಸನ ಜಿಲ್ಲೆ, ಹಾಸನ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ**
**ಸಂ:ಕಾಪಕಾ:ಎಫ್:ಎಸ್‌ಆರ್-20:2003**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

1. ಶ್ರೀ ಸಯ್ಯದ್ ಶೌಕತ್ ಖಾದ್ರಿ ಬಿನ್ ಸಯ್ಯದ್ ಅಹಮದ್ ಪಾಷಾ ಸುಮಾರು 60 ವರ್ಷ.
2. ಶ್ರೀಮತಿ ನಜುಮುನ್ನೀಸಾ ಕೋಂ ಸಯ್ಯದ್ ಶೌಕತ್‌ಪಾಷಾ, ಸುಮಾರು 55 ವರ್ಷ
3. ಸಯ್ಯದ್ ಅಸಿಯಾ ಬಿನ್ ಸಯ್ಯದ್ ಶೌಕತ್ ಪಾಷಾ, 20 ವರ್ಷ ವಾಸ:ಪೀರ್ ಮೊಹಲ್ಲಾ, ಆರ್.ಟಿ. ರಸ್ತೆ, ಹೊಳೇನರಸೀಪುರ ಟೌನ್.

1. ಶ್ರೀ ರಿಯಾಜ್‌ಪಾಷ ಬಿನ್ ಮಹಮ್ಮದ್‌ಗೌಸ್, ಪೀರ್‌ಮೊಹಲ್ಲಾ, ಹೊಳೇನರಸೀಪುರ ಟೌನ್.
2. ದಿ ನ್ಯಾಷನಲ್ ಇನ್‌ಶ್ಯೂರೆನ್ಸ್ ಕಂಪನಿ ನಿಯಮಿತ, ಬ್ರಾಂಚ್ ಆಫೀಸ್, 2ನೇ ಮಹಡಿ, ಗಣೇಶ್ ಬಿಲ್ಡಿಂಗ್, ಬಿ.ಸಿ.ರಸ್ತೆ, ದಕ್ಷಿಣ ಕನ್ನಡ ಜಿಲ್ಲೆ.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಸಯ್ಯದ್ ಮುಜಿಸೀಮ್ ಖಾದ್ರಿ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ 23-11-2002 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್. ಗೋಪಾಲಗೌಡ**

ಪಿ.ಆರ್. 1421 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಹಾಸನ ಜಿಲ್ಲೆ, ಹಾಸನ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ**
**ಸಂ:ಕಾಪಕಾ:ಎಫ್:ಎಸ್‌ಆರ್-22:2003**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

1. ಶ್ರೀಮತಿ ಯಶೋದ ಕೋಂ ಎ.ಎನ್. ಮಂಜುನಾಥ ಅಲಿಯಾಸ್ ಮಂಜುನಾಥ ಸುಮಾರು 30 ವರ್ಷ ವಯಸ್ಸು.
2. ಎಂ. ಸುನೀಲ್ ಬಿನ್ ಎ.ಎನ್. ಮಂಜುನಾಥ ಉರುಫ್ ಮಂಜುನಾಥ, ಸುಮಾರು 10 ವರ್ಷ
3. ಎಂ. ಅನಿಲ್ ಬಿನ್ ಎ.ಎನ್. ಮಂಜುನಾಥ ಅಲಿಯಾಸ್ ಮಂಜುನಾಥ, ಸುಮಾರು 8 ವರ್ಷ ಹಳೇ ಆಲೂರು, ಆಲೂರು ಟೌನ್, ಹಾಸನ ಜಿಲ್ಲೆ.

1. ಶ್ರೀ ಲ್ಯಾನ್ಸಿ ಮೆಸ್‌ಕಾರೆನೆಸ್ ಬಿನ್ ಫ್ರಾನ್ಸಿಸ್ ಮೆಸ್‌ಕಾರೆನೆಸ್, ಲ್ಯಾನ್ಸಿ ಕನ್‌ಸ್ಟ್ರಕ್ಷನ್ಸ್, ಹೋಲಿ ಫ್ಯಾಮಿಲಿ ಕ್ಯಾಸ್ಟಲ್, ನೆಹರೂ ಅವಿನ್ಯೂ ರಸ್ತೆ, ಲಾಲ್‌ಬಾಗ್, ಮಂಗಳೂರು.
2. ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂಪನಿ ನಿಯಮಿತ, 2ನೇ ಮಹಡಿ, ರಾಮ್‌ಭವನ ಕಾಂಪ್ಲೆಕ್ಸ್, ಕೋಡಿಯಾಲ್‌ಬೈಲ್, ಮಂಗಳೂರು.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಎ.ಎನ್. ಮಂಜುನಾಥರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ 5-3-2001 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್. ಗೋಪಾಲಗೌಡ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾಸನ ಜಿಲ್ಲೆ, ಹಾಸನ.

ಪಿ.ಆರ್. 1422

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ**
**ಸಂ:ಕಾಪಕಾ:ಎಫ್:ಎಸ್‌ಆರ್-19:2003**

**ಅರ್ಜಿದಾರರು**

1. ಶ್ರೀಮತಿ ಲಕ್ಷ್ಮಮ್ಮ ಕೋಂ ಲೇಟ್ ಗುಂಡಯ್ಯ, 60 ವರ್ಷ, ಮೃತರ ತಾಯಿ
2. ಹೆಚ್.ಎಂ. ವಾಸು ಬಿನ್ ಲೇಟ್ ಮರಿಯಯ್ಯ ಅಲಿಯಾಸ್ ಮರಿಯಪ್ಪ 15 ವರ್ಷ, ಮೈನರ್. ಹುಳುವಾರೆ ವಾಸಿ, ಮೊಸಳೆಹೊಸಳ್ಳಿ ಅಂಚೆ, ಶಾಂತಿಗ್ರಾಮ ಹೋಬಳಿ, ಹಾಸನ ತಾಲ್ಲೂಕು.

**ವಿರುದ್ಧ**

**ಪ್ರತಿವಾದಿಗಳು**

1. ಶ್ರೀ ಮರಿಬಸಪ್ಪ ಬಿನ್ ಲೇಟ್ ಬಸಪ್ಪ, ಪತಿಯಪ್ಪನ ಪಾಳ್ಯ (ಹಳ್ಳಿ) ಹಳಿಗಟ್ಟ ಅಂಚೆ, ಹಗಲವಾಡಿ ಹೋಬಳಿ, ಗುಬ್ಬಿ ತಾ: ತುಮಕೂರು ಜಿಲ್ಲೆ.
2. ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂಪನಿ ಲಿ., ಹೇಮಾ ಮ್ಯಾನ್‌ಷನ್ 2ನೇ ಮಹಡಿ, ಗಾಂಧಿ ಬಜಾರ್, ಹಾಸನ.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಮರಿಯಪ್ಪ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ 17-10-2002 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್. ಗೋಪಾಲಗೌಡ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾಸನ ಜಿಲ್ಲೆ, ಹಾಸನ.

ಪಿ.ಆರ್. 1423

**ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೊಪ್ಪಳ**
**ಪ್ರಕರಣ ಸಂಖ್ಯೆ:ಕಾಅಕೊ:ಕಾನಪ:ಡಿಸಿ:19:2004 ದಿನಾಂಕ: 1ನೇ ಜನವರಿ 2004**

**ಅರ್ಜಿದಾರರು**

1. ಶ್ರೀಮತಿ ಶಿವಗಂಗವ್ವ ಗಂಡ ವೀರುಪಾಕ್ಷಪ್ಪ ತರಮುಡಿ R/o ಕಲ್ಲೂರ ತಾ।।ಯಲಬುರ್ಗಾ ಜಿ।। ಕೊಪ್ಪಳ
2. ಶ್ರೀ ಕಲ್ಲಪ್ಪ 3 ವಿಜಯ ಆನಂದ 4) ಸುಜಾನಂದ 5) ಸವಿತಾ 6) ಸುಜಾತ ಹಾಗೂ ಕವಿತಾ 7) ಶಂಕರಾನಂದ R/o ಕಲ್ಲೂರ ತಾ।। ಯಲಬುರ್ಗಾ

**ವಿರುದ್ಧ**

**ಪ್ರತಿವಾದಿಗಳು**

1. ಶ್ರೀ ಸಂಗಯ್ಯ ತಂದೆ ಕಲ್ಲಯ್ಯ ಪೂಜಾರ್ R/o ಕರೆಹಳ್ಳಿ ಪೋ।। ಕುಕನೂರ ತಾ।।ಯಲಬುರ್ಗಾ ಜಿ।। ಕೊಪ್ಪಳ
2. ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ ಲಿ., ಹೊಸಪೇಟೆ

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ವಿರುಪಾಕ್ಷಪ್ಪ ತಂದೆ ನೀಲಪ್ಪ ಎಂಬುವವರು ಪ್ರತಿವಾದಿಗಳಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ 11.1.2002 ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923 ರಡಿ ಪರಿಹಾರ ಧನಕ್ಕಾಗಿ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡ ಶ್ರೀ:ಶ್ರೀಮತಿ ಶಿವಗಂಗವ್ವ ಹಾಗೂ ಇತರರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ಅಥವಾ ತಾವೇನಾದರೂ ಅಥವಾ ತಾವೂ ಸಹ ಮೃತ:ಗಾಯ: ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನದೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದ್ರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿಗಳು ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ
ಪಿ.ಆರ್. 1424 ಆಯುಕ್ತರು, ಕೊಪ್ಪಳ ಜಿಲ್ಲೆ, ಕೊಪ್ಪಳ.

**The Court of the 7th A.C.M.M. Bangalore City**
**Notification**

It is Notified for the Information of the General Public that the under mentioned Items Properties are in the Custody of Jalahalli Police Station, Bangalore City, as Unclaimed. Hence if these Properties are not claimed the real owner with the proof of ownership with in six months (6) from the date of notification the properties will be confiscated to the Govt., and will be disposed of according to law.

| S.No. | C.misc., No | P.F. No. | Vehicle No | Chassis No. | Eng.,No. |
|---|---|---|---|---|---|
| 01 | 37/2000 | 12/2000 | Bajaj Chetak No.MEQ-2458 | 03C301-072851 | 03E301-072476 |
| 02 | 69/2000 | 36/2000 | LML Vespa S/c No.PCU-1641 | -Not Known- | 3AN181261 |
| 03 | 28/2001 | 14/2001 | Hero Puch, No.KA-04-K-2354 | CB-84676 | EB84459 |
| 04 | 283/2001 | 92/2001 | Kinetic Honda No.KA-03-4681 | -Not- Known- | 335042- NILHIB |
| 05 | 89/2002 | 26/2002 | TVS-50 XL No. KA-03-H-7846 | A-110F-548733 | -Not Known- |
| 06 | 90/2002 | 27/2002 | Bajaj Priya S/C No.CNS-216 | M102240 | E8203 |
| 07 | 118/2000 | 59/2000 | One Old Hero Jet Cycle (Black colour) | | |
| 08 | 07/2001 | 6/2001 | One Old Hero Jet Cycle (Black colour), No.253373 | | |
| 09 | 128/2001 | 43/2001 | One Old Hero Jet Cycle. | | |
| 10 | 87/2001 | 33/2001 | One Old Hero Jet Cycle Frame No.807972 | | |
| 11 | 17/2001 | 09/2001 | 1) One Old Hero Cycle 2) One Old Hero Cycle 3) One Old Atlas Cycle | | |
| 12 | 123/2002 | 37/2002 | One Old Hercules Cycle AXN. No. BC-158429 | | |
| 13 | 126/2002 | 38/2002 | One bundle palstic pipe 200 mtr's length. | | |
| 14 | 142/2003 | 44/2003 | One Johnson Jumbo jet Air Cooler, No. 23030086 | | |
| 15 | 52/2001 | 26/2001 | One Green Coulr Atlas cycle Frame No.M.B-435802. | | |

P.R. 1425 7th A.C.M.M. COURT, BANGALORE CITY.

**ಪೊಲೀಸ್ ಇನ್ಸ್‌ಪೆಕ್ಟರ್, ಸಿಸಿಬಿ ಹೆಚ್ ಅಂಡ್ ಬಿ-2, ತಾಲ್ಲೂಕು ಕಛೇರಿ ಆವರಣ, ಕೆ.ಜಿ. ರಸ್ತೆ, ಬೆಂಗಳೂರು - 9**

**ಎರಡನೇ ಅವರ ಮುಖ್ಯ ಮಹಾನಗರ ದಂಡಾಧಿಕಾರಿ, ಬೆಂಗಳೂರು**

**ನಿವೇದನೆ:** ಮಾನ್ಯ 1ನೇ ಎಸಿಎಂಎಂ ನ್ಯಾಯಾಲಯದ ನ್ಯಾಯಾಧೀಶರ ಸನ್ನಿಧಾನಕ್ಕೆ

**ವಿಷಯ:** ಸಿಸಿಬಿ ಹೆಚ್ & ಬಿ II ದಳದಲ್ಲಿ ಅಮಾನತ್ತು ಪಡಿಸಿಕೊಂಡಿರುವ ಮಾಲುಗಳ ವಾರಸುದಾರರು ಪತ್ತೆಯಾಗದ ಕಾರಣ ಸದರಿ ಮಾಲುಗಳ ವಾರಸುದಾರರ ಪತ್ತೆಗಾಗಿ ಮಾಲುಗಳ ವಿವರಪಟ್ಟಿ

ಮೇಲ್ಕಂಡ ವಿಷಯಕ್ಕೆ ಸಂಬಂಧಪಟ್ಟಂತೆ ಸಿಸಿಬಿ ಹೆಚ್ & ಬಿ II ದಳ ಅಧಿಕಾರಿಗಳು ವಿವಿಧ ಠಾಣೆಯ ಪ್ರಕರಣಗಳನ್ನು ತನಿಖೆಗೆ ವರ್ಗಾವಣೆ ಪಡೆದುಕೊಂಡು ತನಿಖಾ ಸಮಯದಲ್ಲಿ ಆರೋಪಿಗಳು ಕೊಟ್ಟ ಮಾಹಿತಿಯ ಮೇರೆಗೆ, ಮಾಲುಗಳನ್ನು ಅಮಾನತ್ತು ಪಡಿಸಿಕೊಂಡಿದ್ದು ಸದರಿ ಮಾಲುಗಳ ವಾರಸುದಾರರನ್ನು ಪತ್ತೆ ಮಾಡಲು ಪ್ರಯತ್ನ ನಡೆಸಿದ್ದು, ವಾರಸುದಾರರು ಪತ್ತೆಯಾಗದ ಕಾರಣ, ಮಾಲುಗಳು ವಿಲೇವಾರಿಯಾಗದೇ ಹಾಗೇ ಬಹಳ ದಿನಗಳಿಂದ ಉಳಿದುಕೊಂಡಿರುತ್ತವೆ. ಅಲ್ಲದೆ ಕೆಲವು ಮಾಲುಗಳು ಹಾಳಾಗುವ ಸಾಧ್ಯತೆಯಿರುವುದರಿಂದ ಈ ಕೆಳಕಂಡ ಮಾಲುಗಳ ವಾರಸುದಾರರನ್ನು ಪತ್ತೆ ಮಾಡುವ ಸಲುವಾಗಿ ಈ ಕೆಳಕಂಡ ಮಾಲುಗಳ ವಿವರ ಪಟ್ಟಿಯನ್ನು ಪ್ರಕಟಿಸಲಾಗಿದೆ.

| ಕ್ರ. ಸಂ. | ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ. | ಕಲಂ | ಪಿ.ಎಫ್. ನಂ. | ಮಾಲುಗಳ ವಿವರ |
|---|---|---|---|---|
| 1. | ಯಶವಂತಪುರ 247/92 | 379 ಐಪಿಸಿ | 41/92 | ಎರಡು ಸ್ಪೀಕರ್‌ಗಳು, ಒಂದು ಕಾರ್ ಟೇಪ್‌ರೆಕಾರ್ಡರ್ |
| 2. | ಚಾಮರಾಜಪೇಟೆ 512/91 | 379 ಐಪಿಸಿ | 42/92 | ಎರಡು ಕಾರ್ ಟೇಪ್‌ರೆಕಾರ್ಡರ್ |
| | | | 36/95 | ಒಂದು ವಿಡಿಯೋಕಾನ್ ಟು ಇನ್ ಒನ್ ಟೇಪ್‌ರೆಕಾರ್ಡರ್ |

| ಕ್ರ. ಸಂ. | ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ. | ಕಲಂ | ಪಿ.ಎಫ್. ನಂ. | ಮಾಲುಗಳ ವಿವರ |
|---|---|---|---|---|
| | ಚಾಮರಾಜಪೇಟೆ 512/91 | | 37/95 | ಒಂದು ಮರ್ಫಿ ಟು ಇನ್ ಒನ್ ಟೇಪ್‌ರೆಕಾರ್ಡರ್ |
| | | | | ಒಂದು ಹಳೆಯ ಟೇಪ್‌ರೆಕಾರ್ಡರ್ |
| | | | 37/95 | ಒಂದು ಬಿ.ಪಿ.ಎಲ್ ಸಾನ್ಯೋ ಟೇಪ್‌ರೆಕಾರ್ಡರ್ |
| | | | | ಒಂದು ಸ್ಪೆಷಲ್ ಕಿಂಗ್ ಕಾರ್ ಸ್ಟೀರಿಯೋ |
| | | | | ಒಂದು ಸಿಆರ್ 160 ಕಾರ್ ಸ್ಟೀರಿಯೋ |
| | | | | ಒಂದು ಹಳೆ ನಿಪ್ಪಾನ್ ಕಾರ್ ಸ್ಟೀರಿಯೋ |
| 3. | ಉಪ್ಪಾರಪೇಟೆ 4/93 | 457-380 ಐಪಿಸಿ | 39/95 | ಒಂದು ಪಯೋನೀರ್ ಕಾರ್ ಸ್ಟೀರಿಯೋ |
| | | | 40/95 | ಒಂದು ಫಿಲಿಪ್ಸ್ ಟುಇನ್‌ಒನ್ ಟೇಪ್ ರೆಕಾರ್ಡರ್ |
| | | | 43/95 | ಒಂದು ಕೆಂಪು ಬಣ್ಣದ ಟು ಇನ್ ಒನ್ ಟೇಪ್‌ರೆಕಾರ್ಡರ್ |
| | | | | ಒಂದು ಹಳೆಯ ಕಾರ್ ಸ್ಟೀರಿಯೋ |
| | | | 38/95 | ಒಂದು ಫಿಲಿಪ್ಸ್ ಟುಇನ್‌ಒನ್ ಟೇಪ್‌ರೆಕಾರ್ಡರ್ |
| | | | 59/95 | ಒಂದು ಕಾರ್‌ಸ್ಟೀರಿಯೋ |
| | | | | ಒಂದು ಕಾರ್‌ಸ್ಟೀರಿಯೋ |
| | | | | ಒಂದು ಕಾರ್‌ಸ್ಟೀರಿಯೋ |
| 4. | ಅಲಸೂರ್‌ಗೇಟ್ 391/90 | 379 ಐಪಿಸಿ | 48/90 | ಒಂದು ಸ್ಯಾನಿಯೋ 3 ಬ್ಯಾಂಡ್ ರೇಡಿಯೋ |
| 5. | ಗಿರಿನಗರ 560/90 | 379 ಐಪಿಸಿ | 121/90 | ಒಂದು ಸಾನ್ಯೋ ಟೇಪ್‌ರೆಕಾರ್ಡರ್ |
| | | | | ಒಂದು ಎರೋರ ರೇಡಿಯೋ |
| | | | | ಒಂದು ಟಾಪಿ ರೇಡಿಯೋ |
| | | | 120/90 | ಒಂದು ಹೆಚ್.ಇ.ಎಸ್. ಅಲಾರಾಂ ಗಡಿಯಾರ |
| | | | | ಒಂದು ಕ್ಯಾಸಿಯೋ ಟೆಲಿಫೋನ್, ಆನ್‌ರಿಂಗ್ ಉಪಕರಣ |
| 6. | ಅಲಸೂರ್‌ಗೇಟ್ 152/94 | 379 ಐಪಿಸಿ | 54/94 | ಒಂದು ಕಾರ್ ಸ್ಟೀರಿಯೋ |
| | | | | ಒಂದು ಕಾರ್ ಸ್ಟೀರಿಯೋ |
| | | | 63/94 | ಕ್ಯಾಸೆಟ್ ಡೆಕ್ |
| 7. | ಮಡಿವಾಳ 283/99 | 406,420 ಐಪಿಸಿ | 61/99 | ಎರಡು ಬೋರ್‌ವೆಲ್‌ನ ಬುಷ್‌ಗಳು |
| 8. | ರಾಮಮೂರ್ತಿನಗರ 193/2000 | 394 ಐಪಿಸಿ | 43/2000 | ಒಂದು ಯಾಷಿಕ ಕ್ಯಮೆರಾ, ಬ್ಲಾಕ್ ಕಲರ್, 35 ಎಫ್ |
| 9. | ಅಲಸೂರ್‌ಗೇಟ್ 545/93 | 457-380 ಐಪಿಸಿ | 1/94 | ನ್ಯಾಷನಲ್ ವಿಡಿಯೋ ಕ್ಯಾಸೆಟ್ |
| | | | | ಜೆ.ವಿ.ಸಿ. ವಿಡಿಯೋ ಕ್ಯಾಮೆರಾ |
| | | | | 17 ಆಡಿಯೋ ಕ್ಯಾಸೆಟ್‌ಗಳು |
| 10. | ಜಯನಗರ 421/97 | 457-380 ಐಪಿಸಿ | 16/98 | ಒಂದು ಒನಿಡಾ ಬ್ಲಾಕ್ ಅಂಡ್ ವೈಟ್ ಪೋರ್ಟಬಲ್ ಟಿವಿ. |
| 11. | ಜೆ.ಜೆ. ನಗರ 1024/95 | ರೈಟಿಂಗ್ ಕೇಸು | 134/95 | ನಗದು ಹಣ 2,500-00 ರೂಗಳು |
| | | | 2/96 | ನಗದು ಹಣ 5,000-00 ರೂಗಳು |
| 12. | ಫ್ರೇಜರ್ ಟೌನ್ 307/98 | 454,457-380 ಐಪಿಸಿ | 91/98 | ಒಂದು ಸರ್ವೀಸ್ ರಿವಾಲ್ವರ್ ಮತ್ತು ಐದು ಗುಂಡುಗಳು. |

| ಕ್ರ. ಸಂ. | ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ. | ಕಲಂ | ಪಿ.ಎಫ್. ನಂ. | ಮಾಲುಗಳ ವಿವರ |
|---|---|---|---|---|
| 13. | ಚಿಕ್ಕಪೇಟೆ 418/89 | 454,457-380 ಐಪಿಸಿ | 200/98 | ಈಶ್ವರನ ವಿಗ್ರಹ ಮತ್ತು ಪ್ರಭಾವಳಿ |
| 14. | ಜಯನಗರ 792/91 | 448,506, 364 ಸಹಿತ 34 ಐಪಿಸಿ | 32/92 | ಒಂದು ಮಚ್ಚು |
| | | | 34/92 | ಒಂದು ಮಚ್ಚು |
| | | | 35/92 | ಒಂದು ಮಚ್ಚು |
| 15. | ಅಲಸೂರ್‌ಗೇಟ್ 204/92 | 465,467,468, 472 ಐಪಿಸಿ | 30/92 | 8 ನೋರಿ ಸೀಲುಗಳು |
| 16. | ಚಂದ್ರಾಲೇಔಟ್ 155/98 | 380 ಐಪಿಸಿ | 58/98 | ಒಂದು ಸಾದಾ ಕೆಂಪು ಬಣ್ಣದ ಸೀರೆ, ಒಂದು ವಿಡಿಯೋಗೇಮ್ಸ್ ರಿಮೋಟ್ ಕಂಟ್ರೋಲರ್, ಒಂದು ಜೊತೆ ಬೆಳ್ಳಿಯ ಮಕ್ಕಳ ಕಡಗ, ಒಂದು ಗಿಟಾರ್ ವಾದನ |
| 17. | ಇಂದಿರಾನಗರ 45/96 | 43/96 | 43/96 | ಒಂದು ಜೊತೆ ಬೆಳ್ಳಿಯ ಕಿವಿಯ ಓಲೆ, ಗೋಲ್ಡ್ ಪಾಲಿಷ್ ಮಾಡಿದೆ, ಒಂದು ಜೊತೆ ಬೆಳ್ಳಿಯ ಕಾಲು ಚೈನುಗಳು. |

**ಎಸ್. ರೇವಣ್ಣ**

ಪಿ.ಆರ್. 1427

ಪೊಲೀಸ್ ಇನ್ಸ್‌ಪೆಕ್ಟರ್, ಸಿಸಿಬಿ ಹೆಚ್ ಅಂಡ್ ಬಿ-2
ತಾಲ್ಲೂಕ್ ಕಛೇರಿ ಆವರಣ, ಕೆ.ಜಿ. ರಸ್ತೆ, ಬೆಂಗಳೂರು - 9.

**ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು, ಇವರ ನ್ಯಾಯಾಲಯದಲ್ಲಿ**

**ನಂ: ಎಸ್‌ಡಿಕೆ:757:ಡಿಟಿಸಿಆರ್:1997-98, ದಿನಾಂಕ: 18ನೇ ಡಿಸೆಂಬರ್ 2003**

**ಉಪಸ್ಥಿತರು:-** ಎನ್.ಎಂ. ಹುಸೇನ್,
ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**
ಪೊಲೀಸ್ ಉಪ ನಿರೀಕ್ಷಕರು,
ಬೆಳ್ತಂಗಡಿ ಪೊಲೀಸ್ ಠಾಣೆ, ಬೆಳ್ತಂಗಡಿ.

**ವಿರುದ್ಧ**

**ಆರೋಪಿಗಳು:**
1) ಧರ್ಮಪ್ಪ ಗೌಡ
ಮಂಜೊಟ್ಟಿ ನಡಾ ಗ್ರಾಮ, ಬೆಳ್ತಂಗಡಿ ತಾಲ್ಲೂಕು.
2) ಜಾನ್ ಡಿಸೋಜ, ಬಿನ್: ದಿ. ಲಿಗೋರಿ ಡಿಸೋಜ
ಮಂಜೊಟ್ಟಿ ನಡಾ ಗ್ರಾಮ, ಬೆಳ್ತಂಗಡಿ ತಾಲ್ಲೂಕು.

**ಪ್ರಕರಣದ ಮುಖ್ಯಾಂಶಗಳು:**

ಪೊಲೀಸ್ ಉಪ ನಿರೀಕ್ಷಕರು, ಬೆಳ್ತಂಗಡಿ ಪೊಲೀಸ್ ಠಾಣೆ, ಬೆಳ್ತಂಗಡಿರವರು ದಿನಾಂಕ: 09-05-1998 ರಂದು ದೊರೆತ ಖಚಿತ ವರ್ತಮಾನದ ಮೇರೆಗೆ ತಮ್ಮ ಸಿಬ್ಬಂದಿಯೊಂದಿಗೆ ಕಾಯುತ್ತಿರುವಾಗ ಮಧ್ಯಾಹ್ನ 12.30 ಗಂಟೆಯ ಸಮಯದಲ್ಲಿ ಬೆಳ್ತಂಗಡಿ ಕಡೆಯಿಂದ ಮಂಜೊಟ್ಟಿ ಕಡೆಗೆ ಸಾಗಿ ಬರುತ್ತಿದ್ದ ಆಟೋರಿಕ್ಷಾ ಸಂಖ್ಯೆ: ಸಿಎನ್‌ಜಿ-6337 ವಾಹನ ತಪಾಸಣೆ ಮಾಡಲು ಸದರಿ ರಿಕ್ಷಾವನ್ನು ನಿಲ್ಲಿಸಲು ಸೂಚನೆ ನೀಡಿದಾಗ, ಆಟೋರಿಕ್ಷಾದಿಂದ ಪರಿಚಿತನಾಗಿರುವ ಧರ್ಮಪ್ಪ ಗೌಡ ಎಂಬವರು ರಿಕ್ಷಾದಿಂದ ಜಿಗಿದು ಗುಡ್ಡದ ಕಡೆ ಓಡಿ ಪರಾರಿಯಾದರು. ನಂತರ ಸದರಿ ಆಟೋರಿಕ್ಷಾವನ್ನು ಪರಿಶೀಲಿಸಿದಾಗ, ಆಟೋರಿಕ್ಷಾದ ಹಿಂಭಾಗದ ಡಿಕ್ಕಿಯೊಳಗೆ ಎರಡು ರಟ್ಟಿನ ಪೆಟ್ಟಿಗೆಗಳಲ್ಲಿ ಮದ್ಯ ತುಂಬಿದ 96 ಕ್ವಾರ್ಟರ್ ಬಾಟ್ಲಿಗಳಿರುವುದು ಕಂಡು ಬಂದಿದ್ದುದರಿಂದ, ಆಟೋರಿಕ್ಷಾದ ಚಾಲಕನಲ್ಲಿ ಪ್ರಶ್ನಿಸಿದಾಗ ಈ ಬಗ್ಗೆ ಸರಿಯಾದ ಉತ್ತರ ಕೊಡಲಿಲ್ಲ. ಸದರಿ ಫೆನ್ನಿಯನ್ನು ಸಾಗಾಣಿಕೆ ಮಾಡಲು ರಹದಾರಿ ಇಲ್ಲ ಎಂದು ಆಟೋರಿಕ್ಷಾ ಚಾಲಕ ತಿಳಿಸಿರುತ್ತಾನೆ. ನಂತರ ಸದರಿ ಫೆನ್ನಿಯನ್ನು ಪರಿಶೀಲಿಸಿದಾಗ ಅವುಗಳ ವಿವರ ಈ ಕೆಳಗಿನಂತಿದೆ.

1) ಎ.ಸಿ.ಕ್ಯಾಶ್ಯೂ ಫೆನ್ನಿ ಎಂದು ಲೇಬಲ್ ಬರೆದಿರುವ 180 ಎಂ.ಎಲ್.ನ 48 ಸೀಸೆಗಳು - 8.640 ಲೀಟರ್.

2) ಕೋಕನಟ್ ಫೆನ್ನಿ ಪಂಚಂ ಎಂದು ಲೇಬಲ್ ಬರೆದಿರುವ 180 ಎಂ.ಎಲ್.ನ 48 ಸೀಸೆಗಳು - 8.640 ಲೀಟರ್.

ಸದರಿ ಫೆನ್ನಿಯಿಂದ 180 ಎಂ.ಎಲ್.ನ 2 ಸೀಸೆಗಳನ್ನು ಮಾದರಿಗಾಗಿ ಪ್ರತ್ಯೇಕಿಸಿ ಅದರ ಮುಚ್ಚಳಕ್ಕೆ ಬಿಳಿ ಬಟ್ಟೆ ಸುತ್ತಿ ಎಸ್.ಹೆಚ್.ಓ. ಗುರುತಿನ ಸೀಲ್ ಮಾಡಿರುತ್ತಾರೆ. ನಂತರ ಆಟೋರಿಕ್ಷಾವನ್ನು ಪರಿಶೀಲಿಸಿದಾಗ ಅದರ ನೋಂದಣಿ ಸಂ: ಸಿಎನ್‌ಜಿ-6337 ಆಗಿದ್ದು ನಂತರ ಸದರಿ ಚಾಲಕನ ಹೆಸರು ಮತ್ತು ವಿಳಾಸ ವಿಚಾರಿಸಿದಾಗ ತಾನು ಜಾನ್ ಡಿಸೋಜ, ಬಿನ್: ದಿ. ಲಿಗೋರಿ ಡಿಸೋಜ, ಮಂಜೊಟ್ಟಿ ನಡಾ ಗ್ರಾಮ, ಬೆಳ್ತಂಗಡಿರವರನ್ನು ಸ್ಥಳದಲ್ಲಿಯೇ ದಸ್ತಗಿರಿ ಮಾಡಿ ಸದರಿ ಫೆನ್ನಿಯನ್ನು ಮತ್ತು ಸಾಗಾಣಿಕೆಗೆ ಬಳಸಿದ ಆಟೋರಿಕ್ಷಾವನ್ನು ತಮ್ಮ ವಶಕ್ಕೆ ವಶಪಡಿಸಿಕೊಂಡು ಸ್ಥಳದಲ್ಲಿಯೇ ಮಹಜರನ್ನು ತಯಾರಿಸಿ ಹಾಗೂ ಮಹಜರಿನಲ್ಲಿ ಸ್ಥಳ ಚೆಕ್‌ಬಂದಿ

ಹಾಗೂ ಸಿಬ್ಬಂದಿಯವರ ಸಹಿಯೊಂದಿಗೆ ತಯಾರಿಸಿರುತ್ತಾರೆ. ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಸ್ವತ್ತುಗಳನ್ನು ಮುಂದಿನ ಸೂಕ್ತ ಕ್ರಮಕ್ಕೆ ಈ ಪ್ರಾಧಿಕಾರದ ಅನುಮತಿ ಪಡೆದು ಮೊಕದ್ದಮೆಯ ದಾಖಲಾತಿಗಳನ್ನು ಅಬಕಾರಿ ನಿರೀಕ್ಷಕರು, ಬೆಳ್ತಂಗಡಿ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ಅಬಕಾರಿ ನಿರೀಕ್ಷಕರು, ಬೆಳ್ತಂಗಡಿ ವಲಯ ಇವರು ಪ್ರಕರಣದ ತನಿಖೆಯನ್ನು ಮುಂದುವರಿಸಿ, ಅವರ ಪತ್ರ ಸಂಖ್ಯೆ ದಿನಾಂಕ: 16-06-98ರಲ್ಲಿ ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಅಕ್ರಮ ಫೆನ್ನಿಯ ಸ್ಯಾಂಪಲ್‌ಗಳನ್ನು ರಾಸಾಯನಿಕ ವಿಶ್ಲೇಷಕರಿಗೆ ಕಳುಹಿಸಲಾಗಿದ್ದು, ಸದರಿ ರಾಸಾಯನಿಕ ವಿಶ್ಲೇಷಕರ ಪ್ರಮಾಣ ಪತ್ರ ಸಂಖ್ಯೆ: ಇ 665-2/98-99 ದಿ: 16-06-98ರಲ್ಲಿ ಫೆನ್ನಿಯ ಮದ್ಯಸಾರ ಪ್ರಮಾಣ 42.80% ಇದ್ದು, ಇದು ಮಾನವನ ಸೇವನೆಗೆ ಯೋಗ್ಯವಾಗಿದೆ ಎಂದು ದೃಢೀಕರಣ ಪತ್ರ ನೀಡಿರುತ್ತಾರೆ. ಆದುದರಿಂದ ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಫೆನ್ನಿಯ ಮಾಲೀಕತ್ವದ ಬಗ್ಗೆ ಯಾರೂ ಅರ್ಜಿಯನ್ನು ಸಲ್ಲಿಸದಿರುವ ಕಾರಣ ಈ ಪ್ರಾಧಿಕಾರದ ಆದೇಶ ಸಂ: ಎಸ್‌ಡಿಕೆ:757:ಡಿಟಿಸಿಆರ್:97-98 ದಿನಾಂಕ: 20-08-98 ರಂದು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಲಾಗಿರುತ್ತದೆ.

ಸದರಿ ಮೊಕದ್ದಮೆಯ ಆರ್.ಸಿ. ಮಾಲೀಕರಾದ ಶ್ರೀ ಶ್ಯಾಮ್‌ಸುಂದರ್, ಎನ್.ಬಿ., ಬಿನ್: ಬೊಮ್ಮಣ್ಣ ಗೌಡ (ಪ್ರಾಯ 30 ವರ್ಷ), ವಾಸ: ಅಂತ್ರಯ ಪಾಲ್ಕೆ ಹೌಸ್, ನಡಾ ಗ್ರಾಮ, ಪೆರ್ಮನ್ನೂರು ಪೋಸ್ಟ್, ಬೆಳ್ತಂಗಡಿ ತಾಲ್ಲೂಕುರವರು ತಮ್ಮ ವಕೀಲರ ಮೂಲಕ ದಿನಾಂಕ: 20-5-98 ರಂದು ಈ ಪ್ರಾಧಿಕಾರಕ್ಕೆ ಅರ್ಜಿಯನ್ನು ಸಲ್ಲಿಸಿ ಸದರಿ ಅರ್ಜಿಯಲ್ಲಿ, ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಆಟೋರಿಕ್ಷಾ ಸಂ: ಸಿಎನ್‌ಜಿ-6337 ವನ್ನು ತನಗೆ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಬೇಕೆಂದು ತಮ್ಮ ಅರ್ಜಿಯಲ್ಲಿ ಕೋರಿರುತ್ತಾರೆ. ಸದರಿ ಅರ್ಜಿದಾರರ ಮನವಿಯನ್ನು ಪರಿಗಣಿಸಿ ಈ ಪ್ರಾಧಿಕಾರವು ಆದೇಶ ಸಂ: ಎಸ್‌ಡಿಕೆ:757:ಡಿಟಿಸಿಆರ್:97-98 ದಿ: 11-8-98 ರಂದು ಈ ಪ್ರಾಧಿಕಾರದ ಹೆಸರಿಗೆ ರೂ.10,000/- ಬ್ಯಾಂಕ್ ಭದ್ರತಾ ಪತ್ರವನ್ನು ನೀಡಿದಲ್ಲಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಆಟೋರಿಕ್ಷಾವನ್ನು ಅರ್ಜಿದಾರರ ಮಧ್ಯಕಾಲೀನ ವಶಕ್ಕೆ ತಾತ್ಕಾಲಿಕ ನೆಲೆಯಲ್ಲಿ ಷರತ್ತುಗಳ ಅನ್ವಯ ಬಿಡುಗಡೆಗೊಳಿಸಲು ಆದೇಶ ನೀಡಲಾಗಿರುತ್ತದೆ.

ಅರ್ಜಿದಾರರು ನೀಡಿರುವ ಬ್ಯಾಂಕ್ ಗ್ಯಾರಂಟಿ ಅವಧಿಯು ಮುಕ್ತಾಯವಾಗಿದ್ದು, ಅರ್ಜಿದಾರರಿಗೆ ಮತ್ತು ಬ್ಯಾಂಕಿನವರಿಗೆ ನೋಟೀಸು ನೀಡಲಾಗಿದ್ದು ಸದರಿ ಅರ್ಜಿದಾರರು ಬ್ಯಾಂಕ್ ಅವಧಿಯನ್ನು ವಿಸ್ತರಿಸಿ ನೀಡದ ಕಾರಣ ಅರ್ಜಿದಾರರಿಗೆ ಈ ಪ್ರಾಧಿಕಾರದ ಮುಂದೆ ಹಾಜರಾಗಲು ಹಾಗೂ ಸದರಿ ಮೊಕದ್ದಮೆಯಲ್ಲಿ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಿದ ವಾಹನವನ್ನು ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಲು ದಿ: 3-11-2003 ರಂದು ಅರ್ಜಿದಾರರಿಗೆ ಹಾಗೂ ಅವರ ಪರ ವಕೀಲರಿಗೂ ನೋಟೀಸು ನೀಡಲಾಗಿರುತ್ತದೆ. ಸದರಿ ದಿನಾಂಕದಂದು ಅರ್ಜಿದಾರರ ಪರ ವಕೀಲರು ಹಾಜರಿದ್ದು, ಆರ್.ಸಿ. ಮಾಲೀಕರ ಪರ ವಕೀಲರು ಈ ಪ್ರಾಧಿಕಾರದ ಮುಂದೆ ಮನವಿಯನ್ನು ಸಲ್ಲಿಸಿ ಆರ್.ಸಿ. ಮಾಲೀಕರು ಈ ಪ್ರಾಧಿಕಾರದಿಂದ ತಾತ್ಕಾಲಿಕ ನೆಲೆಯಲ್ಲಿ ಪಡೆದಿರುವ ಆಟೋರಿಕ್ಷಾ ಸಂ: ಸಿಎನ್‌ಜಿ-6337ಕ್ಕೆ ನೀಡಿರುವ ಬ್ಯಾಂಕ್ ಗ್ಯಾರಂಟಿ ಮೊತ್ತವನ್ನು ನೀಡಲು ಸಾಧ್ಯವಾಗದೆ ಇರುವುದರಿಂದ ಹಾಗೂ ತನ್ನ ಆರೋಗ್ಯ ಸರಿಯಿಲ್ಲದಿರುವುದರಿಂದ ಸದರಿ ವಾಹನವನ್ನು ಈ ಪ್ರಾಧಿಕಾರಕ್ಕೆ ಹಿಂತಿರುಗಿಸುವುದಕ್ಕಾಗಿ ಅನುಮತಿಯನ್ನು ಕೋರಿರುತ್ತಾರೆ. ಸದರಿ ಮನವಿಯನ್ನು ಪರಿಶೀಲನೆ ಹಾಗೂ ಮುಂದಿನ ವಿಚಾರಣೆಗಾಗಿ ದಿ:4-12-03 ಕ್ಕೆ ಮುಂದೂಡಲಾಗಿದ್ದು ಸದರಿ ದಿನಾಂಕದಂದು ವಿಚಾರಣೆ ಮಾಡಲಾಯಿತು. ಅಬಕಾರಿ ನಿರೀಕ್ಷಕರು, ಬೆಳ್ತಂಗಡಿ ವಲಯರವರ ಪತ್ರ ಸಂ: ಎಸ್‌ಆರ್‌ಸಿ:ಸಿಆರ್‌ಎಂ:51:97-98 ದಿ: 05-12-2003ರ ತಮ್ಮ ಪತ್ರದಲ್ಲಿ ವಾಹನದ ಆರ್.ಸಿ. ಮಾಲೀಕರಾದ ಶ್ರೀ ಶಾಮ್‌ಸುಂದರ್ ಎನ್.ಬಿ., ಬಿನ್: ಬೊಮ್ಮಣ್ಣಗೌಡ (ಪ್ರಾಯ 30 ವರ್ಷ), ವಾಸ: ಅಂತ್ರಯ ಪಾಲ್ಕೆ ಹೌಸ್, ನಡಾ ಗ್ರಾಮ, ಪೆರ್ಮನ್ನೂರು ಪೋಸ್ಟ್, ಬೆಳ್ತಂಗಡಿ ತಾಲ್ಲೂಕುರವರು ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಿದ ವಾಹನವನ್ನು ಅಬಕಾರಿ ನಿರೀಕ್ಷಕರು, ಬೆಳ್ತಂಗಡಿ ವಲಯ ಇವರ ಸ್ವಾಧೀನಕ್ಕೆ ಒಪ್ಪಿಸಿರುತ್ತಾರೆ, ಎಂದು ವರದಿ ಒಪ್ಪಿಸಿ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಿದ ಆಟೋರಿಕ್ಷಾವನ್ನು ಇಲಾಖೆಗೆ ಒಪ್ಪಿಸಿರುವುದರಿಂದ ಸದ್ರಿ ಆಟೋರಿಕ್ಷಾವನ್ನು ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಿದ ಸಂದರ್ಭದಲ್ಲಿ ವಿಧಿಸಿದ ಷರತ್ತುಗಳ ಅನ್ವಯ ಅರ್ಜಿದಾರರು ಈ ಪ್ರಾಧಿಕಾರದ ಹೆಸರಿಗೆ ನೀಡಿರುವ ಬ್ಯಾಂಕ್ ಗ್ಯಾರಂಟಿಯ ಅವಧಿಯನ್ನು ವಿಸ್ತರಿಸಿ ನೀಡಿರುವುದಿಲ್ಲ. ಆದುದರಿಂದ ಇದು ಷರತ್ತುಗಳ ಉಲ್ಲಂಘನೆ ಮಾಡಿರುವುದರಿಂದ ಹಾಗೂ ಅರ್ಜಿದಾರರು ಈ ಪ್ರಾಧಿಕಾರದ ಮುಂದೆ ಮನವಿಯನ್ನು ಸಲ್ಲಿಸಿದ್ದು, ಸದರಿ ಬ್ಯಾಂಕ್ ಗ್ಯಾರಂಟಿಯ ಅವಧಿಯನ್ನು ವಿಸ್ತರಿಸಿಕೊಡಲು ತನಗೆ ಸಾಧ್ಯವಿಲ್ಲವೆಂದು ತಿಳಿಸಿ ಸದ್ರಿ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಅವರ ಯಾವುದೇ ಆಕ್ಷೇಪ ಇಲ್ಲವೆಂದು ತಿಳಿಸಿದ್ದು, ಹಾಗೂ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಿದ ವಾಹನವು ಈಗಾಗಲೇ ತುಂಬಾ ಹಳೆಯದಾಗಿದ್ದು ಇದನ್ನು ಇನ್ನು ಹೆಚ್ಚು ಕಾಲ ಇರಿಸಿಕೊಂಡರೆ ಸರಕಾರಕ್ಕೆ ನಷ್ಟವುಂಟಾಗುವ ಸಂಭವವಿರುವುದರಿಂದ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಿದ ಆಟೋರಿಕ್ಷಾವನ್ನು ಸರಕಾರಕ್ಕೆ ಒಪ್ಪಿಸಿರುವುದರಿಂದ, ಹಾಗೂ ಸದರಿ ಆಟೋರಿಕ್ಷಾವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಆರ್.ಸಿ. ಮಾಲೀಕರಿಂದ ಯಾವುದೇ ಆಕ್ಷೇಪ ಇಲ್ಲವೆಂದು ತಿಳಿಸಿರುವ ಹಿನ್ನೆಲೆಯಲ್ಲಿ ಆಟೋರಿಕ್ಷಾವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದೇ ಸೂಕ್ತ ಎಂದು ಭಾವಿಸಿ ಈ ಕೆಳಗಿನ ಆದೇಶ.

**ಆದೇಶ ಸಂಖ್ಯೆ: ಎಸ್‌ಡಿಕೆ:757:ಡಿಟಿಸಿಆರ್:1997-98 ದಿನಾಂಕ: 18ನೇ ಡಿಸೆಂಬರ್ 2003**

ಎನ್.ಎಂ. ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965 ಕಲಂ 43 (ಎ)ಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಕಲಂ 43(ಬಿ) ರ ಅನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಕಲಂ 43 (ಸಿ) ರನ್ವಯ ಪೊಲೀಸ್ ಉಪ ನಿರೀಕ್ಷಕರು, ಬೆಳ್ತಂಗಡಿ ಪೊಲೀಸ್ ಠಾಣೆ ಇವರ ಮೊಕದ್ದಮೆ ಸಂಖ್ಯೆ: 67/98 ದಿನಾಂಕ: 09-05-98 ರಲ್ಲಿ ವಶಪಡಿಸಿಕೊಂಡಿರುವ ವಾಹನ ಆಟೋರಿಕ್ಷಾ ಸಂ: ಸಿಎನ್‌ಜಿ-6337 ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿ: 18-12-2003 ರಂದು ಶೀಘ್ರಲಿಪಿಗಾರರಿಗೆ ಉತ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್. 7

**ಕಾರ್ಮಿಕ ನಷ್ಟ ಪರಿಹಾರಕ್ಕೆ ಆಯುಕ್ತರು ಮತ್ತು ಕಾರ್ಮಿಕ ಅಧಿಕಾರಿ, ಇವರ ನ್ಯಾಯಾಲಯದಲ್ಲಿ, ಉಡುಪಿ ಜಿಲ್ಲೆ, ಉಡುಪಿ**

**ಸಂಖ್ಯೆ:ಡಬ್ಲ್ಯುಸಿಎ:ಸಿಆರ್-12/ಎಫ್‌ಸಿ/03, ದಿನಾಂಕ: 19ನೇ ಡಿಸೆಂಬರ್ 2003**

**ಅರ್ಜಿದಾರರು**

1. ಶ್ರೀಮತಿ ಮುಕಾಂಬು ದಿ। ಚಂದ್ರ ಮೊಗೇರ ರವರ ಪತ್ನಿ
2. ನಾಗರತ್ನ, ದಿ। ಚಂದ್ರ ಮೊಗೇರ ರವರ ಮಗಳು.
3. ಸಚಿನ್, ದಿ। ಚಂದ್ರ ಮೊಗೇರ ರವರ ಮಗ.
4. ನಿತಿನ್, ದಿ। ಚಂದ್ರ ಮೊಗೇರ ರವರ ಮಗ.
   ವಾಸ: ನೇಪು ಪಡೂರು, ಬಟ್ರಮಕ್ಕಿ,
   ಅಂಚೆ: ಕೆಂಚನೂರು, ಕುಂದಾಪುರ ತಾಲ್ಲೂಕು.

**ವಿರುದ್ಧ ಪ್ರತಿವಾದಿಗಳು**

1. ಹೆಚ್.ಎಂ. ಮಹೇಶ್ ನಂ:210, 6ನೇ ಮೈನ್ 7ನೇ ಕ್ರಾಸ್, ವೆಸ್ಟ್ ಆಫ್ ಕಾರ್ಡ್‌ರೋಡ್, ರಾಜಾಜಿನಗರ, ಬೆಂಗಳೂರು-560 044.
2. ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂಪನಿ ಲಿಮಿಟೆಡ್, ನಿತ್ಯಾನಂದ ನಗರ, ಮೈಸೂರು ರಸ್ತೆ, ಬೆಂಗಳೂರು-560 039.

**ಪ್ರಕಟಣೆ**

ಅರ್ಜಿದಾರರಾದ: ಅರ್ಜಿದಾರಳಾದ ಶ್ರೀಮತಿ: ಮುಕಾಂಬು ಇವರು ತಮ್ಮ ಮಗನಾದ ಶ್ರೀ ಸತೀಶ ಇವರು ಪ್ರತಿವಾದಿಗಳಾದ ಶ್ರೀ ಹೆಚ್.ಎಂ. ಮಹೇಶ್, ಬೆಂಗಳೂರು ಇವರಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ ದಿನಾಂಕ 29-6-2003 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿವಸಗಳ ಒಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸುವುದೆಂದು ತಿಳಿಸಲಾಗಿದೆ.

**ಎಸ್.ಸಿ. ರಾಮಚಂದ್ರ**
ಕಾರ್ಮಿಕ ನಷ್ಟ ಪರಿಹಾರಕ್ಕೆ ಆಯುಕ್ತರು ಮತ್ತು ಕಾರ್ಮಿಕ ಅಧಿಕಾರಿ, (ಪ್ರಭಾರ)
ಉಡುಪಿ ಜಿಲ್ಲೆ, ಉಡುಪಿ.

ಪಿ.ಆರ್. 8

**ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ತುಮಕೂರು ವಿಭಾಗ, ತುಮಕೂರು ಇವರ ನ್ಯಾಯಾಲಯ**

**ಅಧಿಸೂಚನೆ**

**ಸಂಖ್ಯೆ: ಎ8:ಶ್ರೀಗಂಧ:ಮೊಕದ್ದಮೆ:59:03-04, ದಿನಾಂಕ: 27ನೇ ಡಿಸೆಂಬರ್ 2003**

ತುಮಕೂರು ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧ ಉತ್ಪನ್ನ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನವನ್ನು ಪೊಲೀಸ್ ಇಲಾಖಾ ಸಿಬ್ಬಂದಿ ವರ್ಗದವರು ಸರಕಾರದ ಪರ ಅಮಾನತ್ತು ಪಡಿಸಿಕೊಂಡು ಸದರಿ ವಾಹನವನ್ನು ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 71(ಎ) ಪ್ರಕಾರ ಕ್ರಮ ಕೈಗೊಳ್ಳುವಂತೆ ಕೋರಿರುತ್ತಾರೆ. ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನದ ವಿವರ ಈ ಕೆಳಕಂಡಂತಿದೆ.

| ಕ್ರ. ಸಂ. | ವಾಹನದ ವಿವರ | ಪೊಲೀಸ್ ಮೊಕದ್ದಮೆ ಸಂಖ್ಯೆ | ವಾಹನದ ಸಂಖ್ಯೆ | ಇಂಜಿನ್ ಚಾಸಿಸ್ |
|---|---|---|---|---|
| 1 | ಮಾರುತಿ ಕಾರು | 59:2001 | ಮುಂಭಾಗ ಕೆಎ-13-ಎಂ-6592<br>ಹಿಂಭಾಗ-ಸಿಆರ್‌ಎಕ್ಸ್-6693 | 261086 |

ಈ ಮೇಲೆ ತೋರಿಸಿರುವ ವಾಹನದ ಬಗ್ಗೆ ವಾರಸುದಾರರು ಇಲ್ಲಿಯವರೆಗೆ ಹಾಜರಾಗದೇ ಇರುವುದರಿಂದ ಸದರಿ ವಾಹನದ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ವಾಹನದ ಬಗ್ಗೆ ಅಧಿಕೃತ ಹಕ್ಕು ಬಾಧ್ಯತೆಗಳನ್ನು ಕೆಳ ಸಹಿ ಮಾಡಿರುವವರ ಸಮ್ಮುಖದಲ್ಲಿ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳೊಳಗೆ ಹಾಜರು ಪಡಿಸಬೇಕಾಗಿ ಮತ್ತು ವಾಹನವನ್ನು ಶ್ರೀಗಂಧ ಸಾಗಾಣಿಕೆ ಮಾಡಲು ಉಪಯೋಗಿಸಿದ್ದಕ್ಕಾಗಿ ವಾಹನವನ್ನು ಏಕೆ ಸರಕಾರಕ್ಕೆ ಮುಟ್ಟುಗೋಲು ಹಾಕಿ ಕೊಳ್ಳಬಾರದು ಎಂಬ ಬಗ್ಗೆ ಅವರುಗಳ ಅಧಿಕೃತ ಸಮಜಾಯಿಷಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳಸಹಿ ಮಾಡಿರುವವರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಈ ಮೇಲಿನ ವಾಹನದ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತದ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳ ಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನವನ್ನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ಪ್ರಕಾರ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

**ಗಾ.ನಂ. ಶ್ರೀಕಂಠಯ್ಯ**
ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ತುಮಕೂರು ವಿಭಾಗ, ತುಮಕೂರು.

ಪಿ.ಆರ್. 9

**ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ,**
**ಭದ್ರಾವತಿ ವಿಭಾಗ, ಭದ್ರಾವತಿ**

**ಅಧಿಸೂಚನೆ**

**ಸಂಖ್ಯೆ: ಎಫ್‌ಒಸಿ-ಸಿಒಎನ್-ಸಿಆರ್-20/03-04, ದಿನಾಂಕ: 30ನೇ ಡಿಸೆಂಬರ್ 2003**

ಭದ್ರಾವತಿ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧದ ಹಾಗೂ ಇತರೆ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಉಂಬ್ಲೆಬೈಲು ವಲಯದ ಸಿಬ್ಬಂದಿಯವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು, ಸದರಿ ವಾಹನವನ್ನು ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 71(ಎ)ರ ಪ್ರಕಾರ ಕ್ರಮ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನಗಳ ತಪಶೀಲು ಈ ಕೆಳಕಂಡಂತಿರುತ್ತದೆ.

| ಕ್ರ. ಸಂ. | ವಾಹನದ ವಿವರ | ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1 | ದ್ವಿಚಕ್ರ ವಾಹನ ಸುಜುಕಿ ಫಿಯರೋ ಮೋಟಾರ್ ಬೈಕು ನಂ: ಕೆಎ-18-ಜೆ-4617 (13 ಕೆ.ಜಿ. ಶ್ರೀಗಂಧದ ಬೇರುಗಳು ಹಾಗೂ ಚಕ್ಕೆ ಚೂರುಗಳು) | ಉಂಬ್ಲೆಬೈಲು ವಲಯದ ಅ.ಮೊ. ಸಂಖ್ಯೆ: 123/03-04 ದಿನಾಂಕ 22-12-03. | ಎಂ-1011-ಎಂ-037659 | ಎಂ-1011-ಎಫ್-036420 |

ಈ ಮೇಲ್ಕಂಡ ವಾಹನದ ಬಗ್ಗೆ ಯಾರೂ ವಾರಸುದಾರರು ಇಲ್ಲಿಯವರೆಗೆ ಹಾಜರಾಗದೇ ಇರುವುದರಿಂದ ಸದರಿ ವಾಹನದ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕುಬಾಧ್ಯತೆಗಳನ್ನು ಕೆಳಸಹಿ ಮಾಡಿರುವವರ ಸಮ್ಮುಖದಲ್ಲಿ ಈ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರು ಪಡಿಸಬೇಕಾಗಿ ಮತ್ತು ವಾಹನವನ್ನು ಶ್ರೀಗಂಧ ಮತ್ತು ಇತರೆ ಅರಣ್ಯ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡಲು ಉಪಯೋಗಿಸಿದ್ದಕ್ಕಾಗಿ ವಾಹನವನ್ನು ಏಕೆ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳ ಅಧಿಕೃತ ಸಮಜಾಯಿಸಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳಸಹಿ ಮಾಡಿದವರ ಸಮ್ಮುಖದಲ್ಲಿ ಹಾಜರು ಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಈ ಮೇಲಿನ ವಾಹನದ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳ ಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನವನ್ನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71(ಎ) ಎರಡನೇ ತಿದ್ದುಪಡಿ ಪ್ರಕಾರ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಭದ್ರಾವತಿ ವಿಭಾಗ, ಭದ್ರಾವತಿ.

ಪಿ.ಆರ್. 10

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**

**ಪ್ರ.ಸಂ.ಕಾಅದಾ:ಕಾನಪ:ಸಿಆರ್-207/03, ದಿನಾಂಕ: 10ನೇ ಡಿಸೆಂಬರ್ 2003**

**ಅರ್ಜಿದಾರರು**

ಶ್ರೀಮತಿ ಸುನಂದ
ಕೆ.ಎನ್. ಶರಣಪ್ಪರವರ ಪತ್ನಿ
ಕ್ಯಾದಿಗೆರೆ ಚಿತ್ರದುರ್ಗ ತಾ॥

**ವಿರುದ್ಧ**

**ಪ್ರತಿವಾದಿಗಳು**

1. ಮಹಮದ್ ಹನೀಫ್ ಬಿನ್ ಅಬ್ದುಲ್‌ರಜಾಕ್
ಕುಸೂಗಲ್ 2ನೇ ಕ್ರಾಸ್, ವಿಶಾಲನಗರ,
ಹಳೇಹುಬ್ಬಳ್ಳಿ
2. ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ. ಲಿ.,
ಕಾರವಾರ

**ಪ್ರಕಟಣೆ**

ಶ್ರೀಮತಿ ಸುನಂದ ಇವರು ಮೃತ ಕೆ.ಎನ್. ಶರಣಪ್ಪ ಇವರ ಪತ್ನಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಕೆ.ಎನ್. ಶರಣಪ್ಪ ರವರು ಒಂದನೇ ಪ್ರತಿವಾದಿಗಳಾದ ಮಹಮದ್‌ಹನೀಫ್ ಇವರ ಟ್ರಕ್ ರಲ್ಲಿ ಹಮಾಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ, ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**

ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು, ಕಾರ್ಮಿಕ ನಷ್ಟ
ಪರಿಹಾರ, ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್. 11

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**
**ಪ್ರ.ಸಂ.ಕಾಅದಾ:ಕಾನಪ:ಸಿಆರ್-206/03, ದಿನಾಂಕ: 11ನೇ ಡಿಸೆಂಬರ್ 2003**

**ಅರ್ಜಿದಾರರು** — **ವಿರುದ್ಧ** — **ಪ್ರತಿವಾದಿಗಳು**

ಶ್ರೀಮತಿ ಅನಸೂಯಮ್ಮ
ದಿ|| ತಿಪ್ಪೇಸ್ವಾಮಿಯವರ ಪತ್ನಿ
ಮತ್ತಿತರೆ ಇಬ್ಬರು ಕ್ಯಾದಿಗೆರೆ,
ಚಿತ್ರದುರ್ಗ ತಾ||

1. ಮಹಮದ್ ಹನೀಫ್ ಬಿನ್ ಅಬ್ದುಲ್‌ರಜಾಕ್
ಕುಸೂಗಲ್ 2ನೇ ಕ್ರಾಸ್, ವಿಶಾಲನಗರ,
ಹಳೇಹುಬ್ಬಳ್ಳಿ
2. ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ. ಲಿ., ಕಾರವಾರ

**ಪ್ರಕಟಣೆ**

ಶ್ರೀಮತಿ (1) ಅನಸೂಯಮ್ಮ (2) ರಘು (3) ಬಸವರಾಜ್ ಇವರುಗಳಾದ ತಾವು ಮೃತ ತಿಪ್ಪೇಸ್ವಾಮಿ ಇವರ ಪತ್ನಿ ಮತ್ತು ಮಕ್ಕಳುಗಳು ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ತಿಪ್ಪೇಸ್ವಾಮಿ ರವರು ಒಂದನೇ ಪ್ರತಿವಾದಿಗಳಾದ ಮಹಮದ್ ಹನೀಫ್ ಇವರ ಟ್ರಕ್ ನಲ್ಲಿ ಹಮಾಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ, ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**
ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್. 12

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**
**ಪ್ರ.ಸಂ.ಕಾಅದಾ:ಕಾನಪ:ಸಿಆರ್-198/03, ದಿನಾಂಕ: 28ನೇ ನವೆಂಬರ್ 2003**

**ಅರ್ಜಿದಾರರು** — **ವಿರುದ್ಧ** — **ಪ್ರತಿವಾದಿಗಳು**

1. ಗ್ರೇಸಿ (ಕೆ. ಪಪ್ಪಚಾನ್‌ರವರ ಪತ್ನಿ) 48 ವರ್ಷಗಳು
2. ಕೆ. ಪಪ್ಪಚಾನ್ ಬಿನ್ ಕೋಚುನುನ್ನೈ 58 ವರ್ಷಗಳು
5ನೇ ಮುಖ್ಯರಸ್ತೆ, 7ನೇ ಕ್ರಾಸ್, ದೊಮ್ಮಲೂರು
ಲೇಔಟ್, ಬೆಂಗಳೂರು.

1. ಸ್ಟ್ಯಾನ್‌ಲೀ ಪಪ್ಪಚಾನ್ ಬಿನ್ ಕೆ.ಪಪ್ಪಚಾನ್
ನಂ-67, 7ನೇ ಕ್ರಾಸ್,
ದೊಮ್ಮಲೂರು ಲೇಔಟ್,ಬೆಂಗಳೂರು.
2. ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ. ಲಿ.,
ಒಕ್ಕಲಿಗರ ಭವನ, ಹಡ್ಸನ್‌ಸರ್ಕಲ್ ಬೆಂಗಳೂರು.

**ಪ್ರಕಟಣೆ**

ಶ್ರೀಮತಿ (1) ಗ್ರೇಸಿ ಮತ್ತು (2) ಕೆ. ಪಪ್ಪಚಾನ್ ಬಿನ್ ಕೋಚುನುನ್ನೈ ಇವರುಗಳಾದ ತಾವು ಮೃತ ರೋಸಿಪಪ್ಪಚಾನ್ ಇವರ ತಾಯಿ ಮತ್ತು ತಂದೆ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ರೋಸಿ ಪಪ್ಪಚಾನ್ ರವರು ಒಂದನೇ ಪ್ರತಿವಾದಿಗಳಾದ ಸ್ಟ್ಯಾನ್‌ಲೀ ಪಪ್ಪಚಾನ್ ಇವರ ಮಾರುತಿ ಕಾರ್‌ನಲ್ಲಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ, ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**
ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್. 13

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**
**ಪ್ರ.ಸಂ.ಕಾಅದಾ:ಕಾನಪ:ಸಿಆರ್-133/03, ದಿನಾಂಕ: 4ನೇ ನವೆಂಬರ್ 2003**

**ಅರ್ಜಿದಾರರು** — **ವಿರುದ್ಧ** — **ಪ್ರತಿವಾದಿಗಳು**

1. ಮಹೇಶ್ವರಪ್ಪ ಬಿನ್ ಎಲೆಬಸಪ್ಪ 45 ವರ್ಷಗಳು
2. ಜಯಮ್ಮ ಮಹೇಶ್ವರಪ್ಪರವರ ಪತ್ನಿ 35 ವರ್ಷಗಳು
ಎರ್ಬಾ ಬನ್ನಿ ಕೋಡು, ಹೊನ್ನಾಳ್ಳಿ ತಾಲ್ಲೂಕ್,
ದಾವಣಗೆರೆ ಜಿಲ್ಲೆ.

1. ಆರ್.ಎಂ. ಕಾಂತರಾಜ್ ಬಿನ್ ಮುರಿಗಯ್ಯ
ಬನ್ನಿಕೋಡು, ಹೊನ್ನಾಳಿ ತಾಲ್ಲೂಕ್.
2. ಓರಿಯೆಂಟಲ್ ಇನ್ಸೂರೆನ್ಸ್ ಕಂ. ಲಿ.,
ವಿನಾಯಕ ಕಾಂಪ್ಲೆಕ್ಸ್, 1ನೇ ಕ್ರಾಸ್ ಗಾರ್ಡನ್
ಏರ್ಯಾ ಶಿವಮೊಗ್ಗ.

**ಪ್ರಕಟಣೆ**

ಶ್ರೀ:ಶ್ರೀಮತಿ (1) ಮಹೇಶ್ವರಪ್ಪ (2) ಜಯಮ್ಮ ಇವರುಗಳಾದ ತಾವು ಮೃತ ಬಸವರಾಜ ಇವರ ತಂದೆ ಮತ್ತು ತಾಯಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಬಸವರಾಜ ರವರು ಒಂದನೇ ಪ್ರತಿವಾದಿಗಳಾದ ಆರ್.ಎಂ. ಕಾಂತರಾಜ್ ಇವರ ಟ್ರ್ಯಾಕ್ಟರ್ ನಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ, ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**
ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್. 14

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**

**ಪ್ರ.ಸಂ.ಕಾಅದಾ:ಕಾನಪ:ಸಿಆರ್-176/03, ದಿನಾಂಕ: 4ನೇ ನವೆಂಬರ್ 2003**

**ಅರ್ಜಿದಾರರು**

1. ತಿರುಕಪ್ಪ ತಂದೆ ದುರ್ಗಪ್ಪ 50 ವರ್ಷ
2. ಶ್ರೀಮತಿ ಹನುಮಮ್ಮ ಕೋಂ ತಿರುಕಪ್ಪ 50 ವರ್ಷ
3. ಸಂತೋಷ್ ತಂದೆ ತಿರುಕಪ್ಪ 17 ವರ್ಷ
   ಮಾದೇನಹಳ್ಳಿ, ಹೊನ್ನಾಳಿ ತಾಲ್ಲೂಕ್
   ದಾವಣಗೆರೆ ಜಿಲ್ಲೆ

**ವಿರುದ್ಧ**

**ಪ್ರತಿವಾದಿಗಳು**

1. ಎಸ್.ಸಿ. ದೇಸಾಯಿ, ಕಂಟ್ರಾಕ್ಟರ್,
   ಶೀತಲ್, ಕೆ.ಕೆ. ನಗರ, ಬಿಜಾಪುರ.
2. ಓರಿಯೆಂಟಲ್ ಇನ್ಸೂರೆನ್ಸ್ ಕಂ. ಲಿ.,
   ಬಿ.ಎಲ್.ಡಿ.ಇ. ಕಾಂಪ್ಲೆಕ್ಸ್,
   ಎಸ್.ಎಸ್. ಫ್ರೆಂಟ್‌ರಸ್ತೆ, ಬಿಜಾಪುರ.

**ಪ್ರಕಟಣೆ**

ಶ್ರೀ:ಶ್ರೀಮತಿ (1) ತಿರುಕಪ್ಪ (2) ಹನುಮಮ್ಮ ಮತ್ತು (3) ಸಂತೋಷ್ ಇವರುಗಳಾದ ತಾವು ಮೃತ ಟಿ. ನಾಗರಾಜ ಇವರ ತಂದೆ ತಾಯಿ ಮತ್ತು ತಮ್ಮ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಟಿ. ನಾಗರಾಜ ರವರು ಒಂದನೇ ಪ್ರತಿವಾದಿಗಳಾದ ಎಸ್.ಸಿ. ದೇಸಾಯಿ ಇವರಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ, ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**
ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್. 15

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**

**ಪ್ರ.ಸಂ.ಕಾಅದಾ:ಕಾನಪ:ಸಿಆರ್-156/03, ದಿನಾಂಕ: 10ನೇ ಅಕ್ಟೋಬರ್ 2003**

**ಅರ್ಜಿದಾರರು**

1. ಸಾವಿತ್ರಮ್ಮ 25 ವರ್ಷ
2. ನೀಲಮ್ಮ ಮೈನರ್
3. ನಿಂಬವ್ವ 50 ವರ್ಷ
4. ದಿಲ್ಲಪ್ಪ 55 ವರ್ಷ
   ಕುಂಚೂರು, ಹರಪನಹಳ್ಳಿ ತಾಲ್ಲೂಕ್,
   ದಾವಣಗೆರೆ ಜಿಲ್ಲೆ

**ವಿರುದ್ಧ**

**ಪ್ರತಿವಾದಿಗಳು**

1. ಎನ್.ಎಂ. ರಘು, ಬಿನ್ ರಾಮಣ್ಣ
   ನಂ-1048/1, ಕೆ.ಟಿ.ಜೆ.ನಗರ ದಾವಣಗೆರೆ.
2. ಬ್ರಾಂಚ್ ಮ್ಯಾನೇಜರ್
   ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ.,
   ನಂ-273/13, ಪ್ರವಾಸಿ ಮಂದಿರ ರಸ್ತೆ,
   ದಾವಣಗೆರೆ

**ಪ್ರಕಟಣೆ**

ಶ್ರೀ:ಶ್ರೀಮತಿ (1) ಸಾವಿತ್ರಮ್ಮ (2) ನೀಲಮ್ಮ (3) ನಿಂಬವ್ವ (4) ದಿಲ್ಲಪ್ಪ ಇವರುಗಳಾದ ತಾವು ಮೃತ ಸಿದ್ದೇಶಿ ಇವರ ಪತ್ನಿ ಮತ್ತು ಮಕ್ಕಳು ಹಾಗೂ ತಂದೆ ತಾಯಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಸಿದ್ದೇಶಿ ರವರು ಒಂದನೇ ಪ್ರತಿವಾದಿಗಳಾದ ಎನ್.ಎಂ. ರಘು ಇವರ ಲಾರಿಯಲ್ಲಿ ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ, ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**

ಪಿ.ಆರ್. 16

ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ,
ದಾವಣಗೆರೆ ಜಿಲ್ಲೆ, ದಾವಣಗೆರೆ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**

**ಪ್ರ.ಸಂ.ಕಾಅದಾ:ಕಾನಪ:ಸಿಆರ್-155/03, ದಿನಾಂಕ: 10ನೇ ಅಕ್ಟೋಬರ್ 2003**

**ಅರ್ಜಿದಾರರು**
1. ಗೀತಮ್ಮ ಎ.ಬಿ. ಬಸವರಾಜಪ್ಪನವರ ಮಗಳು 20 ವರ್ಷ
2. ಎ.ಬಿ. ಗೌರಮ್ಮ ಬಸವರಾಜಪ್ಪನವರ ಪತ್ನಿ 34 ವರ್ಷ
3. ಬಸವರಾಜಪ್ಪ 38 ವರ್ಷ

ಅಣ್ಣಾಪುರ, ಚನ್ನಗಿರಿ ತಾಲ್ಲೂಕು ದಾವಣಗೆರೆ ಜಿಲ್ಲೆ.

**ವಿರುದ್ಧ**

**ಪ್ರತಿವಾದಿಗಳು**
1. ಬಿ. ಚಂದ್ರಪ್ಪ ಬಿನ್ ಬಸಪ್ಪ ಬಿಲ್ಲಹಳ್ಳಿ, ಚನ್ನಗಿರಿ ತಾಲ್ಲೂಕ್
2. ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ., ದಾವಣಗೆರೆ.

**ಪ್ರಕಟಣೆ**

ಶ್ರೀ:ಶ್ರೀಮತಿ (1) ಗೀತಮ್ಮ ಎ.ಬಿ. (2) ಎ.ಬಿ. ಗೌರಮ್ಮ (3) ಬಸವರಾಜಪ್ಪ ಇವರುಗಳಾದ ತಾವು ಮೃತ ಸುರೇಶ್ ಇವರ ಅಕ್ಕ ಮತ್ತು ತಂದೆ ತಾಯಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಸುರೇಶ್ ರವರು ಒಂದನೇ ಪ್ರತಿವಾದಿಗಳಾದ ಬಿ. ಚಂದ್ರಪ್ಪ ಬಿನ್ ಬಸಪ್ಪ ಇವರ ಟ್ರ್ಯಾಕ್ಟರ್ ನಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ, ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**

ಪಿ.ಆರ್. 17

ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ,
ದಾವಣಗೆರೆ ಜಿಲ್ಲೆ, ದಾವಣಗೆರೆ.

**ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ತುಮಕೂರು ವಿಭಾಗ, ತುಮಕೂರು ಇವರ ನ್ಯಾಯಾಲಯದ ತಿದ್ದುಪಡಿ ಅಂತಿಮ ಆದೇಶ**

**ಸಂಖ್ಯೆ: ಎ8:71(ಎ):ಅಮೋ:ಸಿಆರ್:111:2001, ದಿನಾಂಕ: 1ನೇ ಡಿಸೆಂಬರ್ 2003**

**ವಿಷಯ:** ಶ್ರೀಗಂಧ ಕಳ್ಳಸಾಗಾಣಿಕೆಯಲ್ಲಿ ತೊಡಗಿದ್ದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ.

**ಉಲ್ಲೇಖ:** ಕರ್ನಾಟಕ ಅರಣ್ಯ ಕಾಯ್ದೆ 1963 ಕಲಂ 71(ಎ) ಪ್ರಕಾರ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ಈ ನ್ಯಾಯಾಲಯದಿಂದ ಹೊರಡಿಸಿದ ಆದೇಶ ದಿನಾಂಕ: 20-5-03.

ಶ್ರೀಗಂಧ ಕಳ್ಳಸಾಗಾಣಿಕೆಯಲ್ಲಿ ತೊಡಗಿದ್ದ ವಾಹನ ಸಂಖ್ಯೆ: ಕೆಎ 26.1118 ಬಿಳಿ ಅಂಬಾಸಿಡರ್ ಕಾರನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿತ್ತು. ಸದರಿ ಪ್ರಕಟಣೆಯು ಕರ್ನಾಟಕ ರಾಜ್ಯಪತ್ರದ ದಿನಾಂಕ: 28-8-03ರ ಪುಟ ಸಂಖ್ಯೆ:1304 ಭಾಗ-3ರಲ್ಲಿ ಪ್ರಕಟವಾಗಿದ್ದು, ವಾಹನ ಸಂಖ್ಯೆಯು ತಪ್ಪಾಗಿ ಕೆಎ 26.118 ಎಂದು ತಪ್ಪಾಗಿ ಮುದ್ರಿತವಾಗಿರುತ್ತದೆ.

ಆದ್ದರಿಂದ ವಾಹನ ಸಂಖ್ಯೆಯನ್ನು ಕೆಎ 26.1118 ಎಂದು ಓದಿಕೊಳ್ಳುವುದು.

**ಗಾ.ನಂ. ಶ್ರೀಕಂಠಯ್ಯ**

ಪಿ.ಆರ್. 18

ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ತುಮಕೂರು ವಿಭಾಗ, ತುಮಕೂರು.

**ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರ ಕಾರ್ಯಾಲಯ, ವಿಜಾಪೂರ**

**ಜ್ಞಾಪನಾ**

**ನಂ: ಇ2-ಪ್ರಾಶಾಶಿ-10120-ಅ.ಗೈ.2002-03, ದಿನಾಂಕ: 1ನೇ ಜನವರಿ 2004**

**ವಿಷಯ:** ವಿಜಾಪೂರ ಜಿಲ್ಲೆಯ ವಿಜಾಪೂರ ತಾಲ್ಲೂಕಿನ 03 ಜನ ಶಿಕ್ಷಕರು 03 ವರ್ಷಗಳಿಂದ ಕರ್ತವ್ಯಕ್ಕೆ ಅನಧಿಕೃತ ಗೈರು ಉಳಿದ ಕಾರಣ ಇವರನ್ನು ಸೇವೆಯಿಂದ ವಜಾಗೊಳಿಸುವ ಬಗ್ಗೆ.

**ಉಲ್ಲೇಖ:**
1. ಕ್ಷೇತ್ರ ಶಿಕ್ಷಣಾಧಿಕಾರಿಗಳು ವಿಜಾಪೂರ ಗ್ರಾಮೀಣ ವಲಯ ಇವರ ಕಾರ್ಯಾಲಯದಿಂದ ನೀಡಿದ ನೋಟೀಸು ದಿನಾಂಕ: 16-11-1998, 3-1-2001, 24-6-2002, 1-7-2002 ಹಾಗೂ 24-6-2002.
2. ಸಂಯುಕ್ತ ಕರ್ನಾಟಕ ದಿನಪತ್ರಿಕೆ ಜಾಹಿರಾತು ನೀಡಿದ ದಿನಾಂಕ:26-11-2002.
3. ಈ ಕಛೇರಿ ಪತ್ರ ದಿನಾಂಕ: 16-1-2003, 28-4-2003, 14-5-2003.

ಮೇಲಿನ ವಿಷಯ ಹಾಗೂ ಉಲ್ಲೇಖಗಳ ಮೇರೆಗೆ ಈ ಕೆಳಗೆ ಕಾಣಿಸಿದ ಶಿಕ್ಷಕರು 3-4 ವರ್ಷಗಳಿಂದ ಶಾಲೆಗಳಿಗೆ ಬಾರದೇ ತಮ್ಮ ಕರ್ತವ್ಯದಿಂದ ಅನಧಿಕೃತ ಗೈರುಹಾಜರು ಉಳಿದಿದ್ದಾರೆ. ಈ ಶಿಕ್ಷಕರಿಗೆ ಉಲ್ಲೇಖಿತ ಪತ್ರಗಳ ಪ್ರಕಾರ 03 ಸಲ ನೋಟೀಸು ಜಾರಿ ಮಾಡಿದಾಗ್ಯೂ ಕೂಡಾ ಶಿಕ್ಷಕರಿಂದ ಯಾವುದೇ ಪ್ರತ್ಯುತ್ತರ ಬಾರದೇ ಇದ್ದುದರಿಂದ ಉಲ್ಲೇಖ(2)ರ ಪ್ರಕಾರ ಸಂಯುಕ್ತ ಕರ್ನಾಟಕ ದಿನಪತ್ರಿಕೆಯಲ್ಲಿ ಜಾಹಿರಾತು ನೀಡಲಾಯಿತು. ಆದಾಗ್ಯೂ ಶಿಕ್ಷಕರು ಯಾವುದೇ ಪ್ರತ್ಯುತ್ತರ ನೀಡದೇ ಇದ್ದುದರಿಂದ ಸದರ ಶಿಕ್ಷಕರ ಮನೆ ಬಾಗಿಲಿಗೆ ಅಂತಿಮ ನೋಟೀಸು ಜಾರಿ ಮಾಡುವಂತೆ ಕ್ಷೇತ್ರ ಶಿಕ್ಷಣಾಧಿಕಾರಿಗಳು ಗ್ರಾಮೀಣ ವಲಯ ಇವರಿಗೆ ತಿಳಿಸಲಾಗಿತ್ತು. ಈಗ ಶಿಕ್ಷಕರ ವಿಳಾಸಗಳು ಬದಲಾವಣೆಗಳಾಗಿದ್ದು ಅವರ ಮನೆ ಬಾಗಿಲಿಗೆ ನೋಟೀಸು ಜಾರಿ ಮಾಡುವುದು ಆಗುತ್ತಿಲ್ಲವೆಂದು ವರದಿ ಮಾಡಿದ್ದಾರೆ.

ಮಕ್ಕಳ ಶೈಕ್ಷಣಿಕ ಹಿತದೃಷ್ಟಿಯಿಂದ ಶಿಕ್ಷಕರನ್ನು ಕೆ ಸಿ ಎಸ್ ಆರ್ ನಿಯಮ 108(ಸಿಸಿಎ) ನಿಯಮ 1957ರ ನಿಯಮ 8(8)ರ ಪ್ರಕಾರ ಸೇವೆಯಿಂದ ಕಡಿಮೆ ಮಾಡಲು ನಿರ್ಧರಿಸಿದೆ.

| ಅ: ನಂ: | ಶಿಕ್ಷಕರ ಹೆಸರು ಮತ್ತು ಶಾಲೆಯ ಹೆಸರು | ಕರ್ತವ್ಯಕ್ಕೆ ಗೈರು ಉಳಿದ ದಿನಾಂಕ | ಷರಾ |
|---|---|---|---|
| 1) | ಶ್ರೀ ಎ ಎಚ್ ಜಹಗೀರದಾರ, ಸಶಿ ಸರಕಾರಿ ಉ.ಗಂ ಮ ಶಾ, ಜೈನಾಪೂರ ತಾ:ಜಿ:ವಿಜಾಪೂರ. | 07-11-1998 ರಿಂದ | |
| 2) | ಶ್ರೀ ಎ ಎಚ್ ಕರಿಗಾರ, ಸಶಿ ಸ ಕ ಗಂ ಮ ಶಾಲೆ, ಗುಣಕಿ ತಾ:ಜಿ:ವಿಜಾಪೂರ. | 01-06-2001 ರಿಂದ | |
| 3) | ಶ್ರೀಮತಿ ಜಿ ಎಸ್ ದೇಶಪಾಂಡೆ, ಸಶಿ ಸ ಕ ಹೆ ಮ ಶಾಲೆ, ಸಾರವಾಡ ಲೀನ ಶಿಫ್ಟ ಸಕಗಂಶಾ ಅಸಂತಾಪುರ ತಾ:ಸಿಂದಗಿ | 10-07-1999 ರಿಂದ | |

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಮೇಲ್ಕಾಣಿಸಿದ ಶಿಕ್ಷಕರನ್ನು ಉಲ್ಲೇಖಗಳನ್ವಯ ಸಿ ಸಿ ಎ ನಿಯಮ 1957 ನಿಯಮ 8(8)ರ ಪ್ರಕಾರ ಪ್ರದತ್ತವಾದ ಅಧಿಕಾರದ ಮೇರೆಗೆ ಸೇವೆಯಿಂದ ವಜಾಗೊಳಿಸಿ ಆದೇಶಿಸಿದೆ.

ಉಪನಿರ್ದೇಶಕರು,
ಸಾರ್ವಜನಿಕ ಶಿಕ್ಷಣ ಇಲಾಖೆ, ವಿಜಾಪೂರ.

ಪಿ.ಆರ್. 19

**ಕಾರ್ಮಿಕ ನಷ್ಟ ಪರಿಹಾರಕ್ಕೆ ಆಯುಕ್ತರು ಮತ್ತು ಕಾರ್ಮಿಕ ಅಧಿಕಾರಿ, ಉಡುಪಿ ಜಿಲ್ಲೆ, ಉಡುಪಿ ಇವರ ನ್ಯಾಯಾಲಯದಲ್ಲಿ**
**ಸಂಖ್ಯೆ:ಡಬ್ಲ್ಯುಸಿಎ:ಸಿಆರ್-14/ಎಫ್‌ಸಿ/2003, ದಿನಾಂಕ: 2ನೇ ಜನವರಿ 2004**

**ಅರ್ಜಿದಾರರು**

ಶ್ರೀಮತಿ ಸರಸ್ವತಿ, ಕುಟ್ಟನ್‌ರವರ ಪತ್ನಿ, ತಂದಾಸ್ಸೆರಿ, 8-ಕಲಡಿ, ಮೆಲ್ಲೂರು, ಮುಕುಂದಪುರಂ ತಾಲ್ಲೂಕು, ತ್ರಿಶೂರ್ ಜಿಲ್ಲೆ, ಕೇರಳ.

**ವಿರುದ್ಧ ಪ್ರತಿವಾದಿಗಳು**

1. ಇ.ಕೆ. ಅಯ್ಯಪ್ಪನ್, ಪರಮೇಶ್ವರನ್ ನಂಬಿಡಿಯವರ ಮಗ, ಮೆಲ್ಲೂರು ಗ್ರಾಮ, ಮುಕುಂದಪುರಂ ತಾಲ್ಲೂಕು, ತ್ರಿಶೂರ್ ಜಿಲ್ಲೆ, ಕೇರಳ.
2. ಯುನೈಟೆಡ್ ಇಂಡಿಯ ಇನ್ಸೂರೆನ್ಸ್ ಕಂ. ಶ್ರೀ ಕುಮಾರ್ ಬಿಲ್ಡಿಂಗ್, ಸತ್ ಜಂಕ್ಷನ್, ಚಲಕುಡಿ, ಕೇರಳ.

**ಅಧಿಸೂಚನೆ**

ಅರ್ಜಿದಾರಳಾದ ಶ್ರೀಮತಿ: ಸರಸ್ವತಿ ಇವರು ತಮ್ಮ ಮಗನಾದ ಶ್ರೀ ದಿನೇಶ್ ಟಿ.ಕೆ. ಇವರು ಪ್ರತಿವಾದಿಗಳಾದ ಶ್ರೀ ಇ.ಕೆ. ಅಯ್ಯಪ್ಪನ್ ಇವರಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ ದಿನಾಂಕ 31-10-2003 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ, ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿವಸಗಳ ಒಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸುವುದೆಂದು ತಿಳಿಸಲಾಗಿದೆ.

**ರಾಮಚಂದ್ರ**
ಕಾರ್ಮಿಕ ನಷ್ಟ ಪರಿಹಾರಕ್ಕೆ ಆಯುಕ್ತರು ಮತ್ತು ಕಾರ್ಮಿಕ ಅಧಿಕಾರಿ,
ಉಡುಪಿ ಜಿಲ್ಲೆ, ಉಡುಪಿ.

ಪಿ.ಆರ್. 20

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**

**ಅಮೊ. ವಾಹನ. 196/1985-86, ದಿನಾಂಕ: 5ನೇ ಜನವರಿ 2004**

| | | |
|---|---|---|
| **ಉಪಸ್ಥಿತರು** | : | ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ. |
| **ಫಿರ್ಯಾದುದಾರರು** | : | ಸಾಗರ ವಿಭಾಗದ ವಲಯ ಅರಣ್ಯಾಧಿಕಾರಿಗಳು, |
| **ಆರೋಪಿಗಳು** | : | ಸಿಕ್ಕಿರುವುದಿಲ್ಲ. |
| **ಬಾಧ್ಯತೆದಾರರು** | : | 1) ಯಾರು ಬಂದಿಲ್ಲ. |

**ಪ್ರಸ್ತಾವನೆ:**

ಸಾಗರ ವಿಭಾಗದ ವಿವಿಧ ವಲಯಗಳಲ್ಲಿ ಅರಣ್ಯ ಉತ್ಪನ್ನಗಳ ಅಕ್ರಮ ಸಾಗಾಣಿಕೆಯಲ್ಲಿ ವಶಪಡಿಸಿಕೊಂಡ ವಾಹನಗಳು ಬಹಳ ಕಾಲದಿಂದ ಅಂದರೆ ಸುಮಾರು 20 ರಿಂದ 25 ವರ್ಷಗಳ ಹಳೆಯ ವಾಹನಗಳಾಗಿದ್ದು, ಈಗ ಸಾಗರ ವಲಯದ ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿ ನಿಲ್ಲಿಸಿರುತ್ತದೆ. 1994-95ಕ್ಕಿಂತ ಹಿಂದೆ ವಾಹನದ ಶೆಡ್ ಇರಲಿಲ್ಲ. ಆದ್ದರಿಂದ ಈ ವಾಹನಗಳು ಮಳೆ, ಗಾಳಿ, ಬಿಸಿಲಿಗೆ ಹಾಳಾಗಿ ಬಿಡಿ ಭಾಗಗಳು ನೆಲಕ್ಕೆ ಬೀಳುತ್ತಿವೆ. ಈ ವಾಹನಗಳು ಸ್ಕ್ರ್ಯಾಪ್ ಕಂಡಿಷನ್‌ನಲ್ಲಿದ್ದು, ಈ ವಾಹನಗಳನ್ನು ಯಾರು ಇಲ್ಲಿಯವರೆಗೆ ಬಿಡಿಸಿಕೊಂಡು ಹೋಗಿರುವುದಿಲ್ಲ. ಅಲ್ಲದೇ ಈ ವಾಹನಗಳ ಹಾಗೆ ಇನ್ನು ನಿಲ್ಲಿಸಿದರೆ ಇನ್ನು ಹಾಳಾಗಿ ಸರ್ಕಾರಕ್ಕೆ ನಷ್ಟವುಂಟಾಗುವುದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳ ಅನುಸಾರವಾಗಿ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಪ್ರಕಾರ ಸಾಗರ ವಿಭಾಗದ ವಲಯ ಅರಣ್ಯಾಧಿಕಾರಿಗಳು, ಇವರು ಜಪ್ತಿ ಮಾಡಿದ ವಾಹನ ಲಾರಿ ನಂ. ಎಂಟಿಎಲ್. 1868, ಅನ್ನು ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ವಾಹನದ ಬಿಡಿಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿನಾಂಕ 27-12-2003 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ

ಪಿ.ಆರ್. 21

**ಕೃಷಿ ಮಾರಾಟ ಇಲಾಖೆ**

**ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ. 16, 2ನೇ ರಾಜಭವನ ರಸ್ತೆ, ಪಿ.ಬಿ. ನಂ. 5309, ಬೆಂಗಳೂರು - 560 001.**

**ಅಧಿಸೂಚನೆ**

**ಸಂಖ್ಯೆ:ಕೃಮಾಇ:151:ನಿಯವಿ:2002, ದಿನಾಂಕ: 17ನೇ ನವೆಂಬರ್ 2003**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ ಪ್ರಕರಣ 6ರ ಉಪ ಪ್ರಕರಣ (2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕದಲ್ಲಿ ಕೃಷಿ ಮಾರಾಟ ನಿರ್ದೇಶಕನಾಗಿರುವ ಸೈಯದ್ ಜಮೀರ್ ಪಾಷಾ ಆದ ನಾನು ವಿಜಾಪೂರ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಮಾರುಕಟ್ಟೆ ಕ್ಷೇತ್ರದಲ್ಲಿ ಕಾಲಕಾಲಕ್ಕೆ ಹೊರಡಿಸಲಾದ ಸರ್ಕಾರಿ ಅಧಿಸೂಚನೆಗಳ ಮೂಲಕ ಮಾರಾಟ ನಿಯಂತ್ರಣಕ್ಕೆ ಒಳಪಡಿಸಿರುವ ಈ ಕೆಳಕಾಣಿಸಿದ ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕಾಗಿ ವಿಜಾಪೂರ ಜಿಲ್ಲೆಯ ಬಸವನ ಬಾಗೇವಾಡಿ ತಾಲ್ಲೂಕಿನ ನಿಡಗುಂದಿ ಗ್ರಾಮ ಪಂಚಾಯಿತಿ ಪರಿಮಿತಿಯೊಳಗಿನ ಪ್ರದೇಶವನ್ನು "ಉಪ ಮಾರುಕಟ್ಟೆ" ಎಂದು ಮತ್ತು ಈ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವ ಸ್ಥಳವನ್ನು "ಉಪ ಮಾರುಕಟ್ಟೆ ಪ್ರಾಂಗಣ" ಎಂದು ಈ ಮೂಲಕ ಘೋಷಿಸಿದ್ದೇನೆ.

**ನಿಯಂತ್ರಣಕ್ಕೊಳಪಡಿಸಿರುವ ಕೃಷಿ ಉತ್ಪನ್ನಗಳು**

1. ಜಾನುವಾರುಗಳು, 2. ಮೇಕೆಗಳು, 3. ಕುರಿಗಳು, 4. ಹತ್ತಿ (ಬೀಜ ತೆಗೆದ ಮತ್ತು ತೆಗೆಯದ), 5. ಎಲ್ಲಾ ಹೂ.ಗಳು, 6. ಸಜ್ಜೆ, 7.ಜವೆ ಗೋಧಿ, 8. ಜೋಳ, 9. ಕಂಬು, 10. ಮೆಕ್ಕೆ ಜೋಳ, 11.ನವಣೆ, 12. ಭತ್ತ, 13. ರಾಗಿ, 14. ಅಕ್ಕಿ, 15. ಸಾಮೆ (ಸಾವೆ), 16. ಗೋಧಿ, 17. ಅಂಟುವಾಳ, 18. ಬೊಂಬು, 19. ಬೆತ್ತ, 20. ಹಿಪ್ಪೆಬೀಜ, 21. ಹೊಂಗೆಬೀಜ, 22. ಬೇವಿನಬೀಜ, 23. ಸೀಗೇಕಾಯಿ, 24. ಹುಣಸೇಹಣ್ಣು, 25. ಹುಣಸೆಬೀಜ, 26. ಸೇಬು, 27. ಬಾಳೆಹಣ್ಣು, 28. ಬೋರೆಹಣ್ಣು, 29. ಹುಳಿಹಣ್ಣುಗಳು, 30. ಚಕ್ಕೋತನ ಹಣ್ಣು, 31. ಪೇರಲೆಹಣ್ಣು, (ಸೀಬೆಹಣ್ಣು), 32. ದ್ರಾಕ್ಷಿ, 33. ಹಲಸಿನ ಹಣ್ಣು, 34. ಜಂಬುನೇರಳೆ ಹಣ್ಣು, 35. ನಿಂಬೆಹಣ್ಣು, 36. ಕರಬೂಜ, 37. ಮಾವಿನಹಣ್ಣು, 38. ಮೂಸಂಬಿ, 39. ಮರಸೇಬು, 40. ಪೈನಾಪಲ್ (ಅನಾನಸ್), 41. ಪಪ್ಪಾಯಿಹಣ್ಣು (ಪರಂಗಿಹಣ್ಣು), 42. ದಾಳಿಂಬೆಹಣ್ಣು, 43. ಸಪೋಟಾ, 44. ಸಿದ್ದೋಟ, 45. ಕಿತ್ತಳೆ, 46. ಕಲ್ಲಂಗಡಿ, 47. ನೆಲಗಡಲೆ (ಶೇಂಗಾ) (ಕಾಯಿ ಮತ್ತು ಬೀಜ), 48. ಹರಳುಬೀಜ, 49. ಹತ್ತಿಬೀಜ, 50. ಅಗಸೆಬೀಜ, 51. ಸಾಸುವೆ, 52. ಹುಚ್ಚೆಳ್ಳು, 53. ಕುಸುಬೆ, 54. ಎಳ್ಳು, 55. ಸೂರ್ಯಕಾಂತಿಬೀಜ, 56. ಸೋಯಾಬಿನ್, 57. ಅಡಿಕೆ, 58. ಗೋಡಂಬಿಬೀಜ, 59. ಒಣಮೆಣಸಿನಕಾಯಿ, 60. ತೆಂಗಿನಕಾಯಿ, 61. ಕೊಬ್ಬರಿ, 62. ಕೊತ್ತಂಬರಿಬೀಜ (ಧನಿಯಾ), 63. ಬೆಳ್ಳುಳ್ಳಿ, 64. ಶುಂಠಿ, 65. ಮೆಂತ್ಯ, 66. ಕಾಳುಮೆಣಸು, 67. ಅರಿಶಿನ, 68. ಅಲಸಂದೆ (ಇಡೀ ಮತ್ತು ಒಡೆದ), 69. ಅವರೆ (ಇಡೀ ಮತ್ತು ಒಡೆದ),

70. ಕಡಲೆ (ಇಡೀ ಮತ್ತು ಒಡೆದ), 71. ಉದ್ದು (ಇಡೀ ಮತ್ತು ಒಡೆದ), 72. ಬುಲ್ಲರ್ (ಇಡೀ ಮತ್ತು ಒಡೆದ), 73. ಹೆಸರು (ಇಡೀ ಮತ್ತು ಒಡೆದ), 74. ಹುರುಳಿ, 75. ಲಾಕ್ (ಇಡೀ ಮತ್ತು ಒಡೆದ), 76. ಮಡಿಕೆ (ಮಟಕಿ) (ಇಡೀ ಮತ್ತು ಒಡೆದ), 77. ಚೆನ್ನಂಗಿ (ಮಸೂರಿ) (ಇಡೀ ಮತ್ತು ಒಡೆದ), 78. ಬಟಾಣಿ, 79. ತೊಗರಿ (ಇಡೀ ಮತ್ತು ಒಡೆದ), 80. ಮೋತ್ (ಇಡೀ ಮತ್ತು ಒಡೆದ), 81. ಎಲ್ಲಾ ತರಕಾರಿಗಳು (ಗರ್ಕಿನ್ ಹೊರತುಪಡಿಸಿ ಸೊಪ್ಪುಗಳು ಸೇರಿಸಿ), 82. ಕಾಯಿಗಳು, 83. ಹಸಿರು ಮೆಣಸಿನಕಾಯಿ, 84. ಈರುಳ್ಳಿ, 85. ಆಲೂಗಡ್ಡೆ, 86. ಸುವರ್ಣಗಡ್ಡೆ, 87. ಸಿಹಿಗೆಣಸು (ಗೆಣಸು), 88. ಟೊಮ್ಯಾಟೋ, 89. ಬೀಟೆ (ರೋಸ್ ವುಡ್), 90. ಬಿಲ್ವಾಲ, 91. ಉರುವಲು ಕಟ್ಟಿಗೆ, 92. ಗಂಜಾನ್, 93. ಹಡಗ, 94. ಹಳದಿ, 95. ಹನಿಮತ್ತಲ್, 96. ಹೊನ್ನೆ, 97. ಐಯಾನಿ, 98. ಹಲಸಿನಮರ, 99. ಜಂಬ, 100. ಕಲನ್, 101. ಕಿಂಡಲ್, 102, ಮಾವಿನಮರ, 103. ಮತ್ತಿ, 104. ನಂದಿ, 105. ರಾಂಪತ್ರೆ, 106. ತೇಗ (ಸಾಗವಾನಿ), 107. ಬಿಳಿ ದೇವದಾರು (ಕೇದರ), 108. ಸಿಲ್ವರ್ ಓಕ್, 109. ನೀಲಗಿರಿ, 110. ವಿಳ್ಯೆದೆಲೆ, 111. ಬೆಲ್ಲ, 112. ತೆಂಗಿನಕಡ್ಡಿ, 113. ಒಣದ್ರಾಕ್ಷಿ.

**ಅನುಸೂಚಿ**

ವಿಜಾಪೂರ ಜಿಲ್ಲೆ ಬಸವನ ಬಾಗೇವಾಡಿ ತಾಲ್ಲೂಕಿನ ನಿಡಗುಂದಿ ಗ್ರಾಮ ಪಂಚಾಯಿತಿ ಪರಿಮಿತಿಯೊಳಗಿನ ಹಾಲಿ ಸಂತೆ ನಡೆಯುವ ಈ ಕೆಳಗಿನ ಸೀಮಾಬದ್ಧ ಸ್ಥಳ:-

| | | |
|---|---|---|
| ಪೂರ್ವಕ್ಕೆ | : | ಕನ್ನಡ ಶಾಲೆ |
| ಪಶ್ಚಿಮಕ್ಕೆ | : | ಗೌರೀಶ್ವರ ಗುಡಿಗೆ ಬರುವ ದಾರಿ |
| ಉತ್ತರಕ್ಕೆ | : | ಕಿರಾಣಿ ಮತ್ತು ಇತರೆ ಅಂಗಡಿಗಳು |
| ದಕ್ಷಿಣಕ್ಕೆ | : | ಕಿರಾಣಿ ಮತ್ತು ಇತರೆ ಅಂಗಡಿಗಳು |

**ಸೈಯದ್ ಜಮೀರ್ ಪಾಷಾ**

ಪಿ.ಆರ್. 22 ನಿರ್ದೇಶಕರು, ಕೃಷಿ ಮಾರಾಟ ಇಲಾಖೆ ಬೆಂಗಳೂರು.

**ಕೃಷಿ ಮಾರಾಟ ಇಲಾಖೆ**

**ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ. 16, 2ನೇ ರಾಜಭವನ ರಸ್ತೆ, ಪಿ.ಬಿ. ನಂ. 5309, ಬೆಂಗಳೂರು - 560 001.**

**ತಿದ್ದೋಲೆ ಅಧಿಸೂಚನೆ**

**ಸಂಖ್ಯೆ:ಕೃಮಾಇ:73:ನಿಯವಿ:1998, ದಿನಾಂಕ: 14ನೇ ಸೆಪ್ಟೆಂಬರ್/ನವೆಂಬರ್ 2003**

ಪಾಂಡವಪುರ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ "ಮಾರುಕಟ್ಟೆ" ಮತ್ತು "ಮಾರುಕಟ್ಟೆ ಪ್ರಾಂಗಣ" ಎಂದು ಘೋಷಿಸಿರುವ ಈ ಕಛೇರಿ ಅಧಿಸೂಚನೆ ಸಂ: ಕೃಮಾಇ:73:ನಿಯವಿ:1998, ದಿನಾಂಕ: 19-07-2002ರ ಕಂಡಿಕೆ 2ರ 6ನೇ ಸಾಲಿನಲ್ಲಿರುವ "ಪಾಂಡವಪುರ ಪಟ್ಟಣ ಪರಿಮಿತಿಯೊಳಗಿನ ಪ್ರದೇಶವನ್ನು" ಎಂಬುದಕ್ಕೆ ಬದಲಾಗಿ "ಪಾಂಡವಪುರ ಪಟ್ಟಣ ಪರಿಮಿತಿ ಮತ್ತು ಹಾರೋಹಳ್ಳಿ ಗ್ರಾಮದ ಪರಿಮಿತಿಯೊಳಗಿನ ಪ್ರದೇಶಗಳನ್ನು" ಎಂದು ಮತ್ತು ಅನುಸೂಚಿ "ಎ" ಯನ್ನು ಈ ಕೆಳಕಂಡಂತೆ ಓದಿಕೊಳ್ಳತಕ್ಕದ್ದು ಎಂದು ತಿದ್ದುಪಡಿ ಹೊರಡಿಸಲಾಗಿದೆ.

**ಅನುಸೂಚಿ**

ಪಾಂಡವಪುರ ಉಪಮಾರುಕಟ್ಟೆ ಹಾರೋಹಳ್ಳಿ ಗ್ರಾಮದ ಮೋಜಣಿ ಸಂಖ್ಯೆ: 25:4, 34:1, 34:2ಎ, 35:1,2,3ರ 10 ಎಕರೆ 20 ಗುಂಟೆ ಜಮೀನಿನಲ್ಲಿ ಅಭಿವೃದ್ಧಿಪಡಿಸಿರುವ ಈ ಕೆಳಗಿನ ಸೀಮಾಬದ್ಧ ಸ್ಥಳ:-

| | | |
|---|---|---|
| ಪೂರ್ವಕ್ಕೆ | : | ವಿ.ಸಿ. ನಾಲಾ |
| ಪಶ್ಚಿಮಕ್ಕೆ | : | ಕನ್ನಾಂಬಾಡಿ-ಪಾಂಡವಪುರ ರಸ್ತೆ |
| ಉತ್ತರಕ್ಕೆ | : | ದೇವಸ್ಥಾನ ಹಾಗೂ ಸಮುದಾಯ ಭವನ |
| ದಕ್ಷಿಣಕ್ಕೆ | : | ಹಾರೋಹಳ್ಳಿ ಗ್ರಾಮದ ಸರ್ವೇ ನಂ. 35:54 ಮತ್ತು 33:2ಎ ರಲ್ಲಿನ ಜಮೀನು |

**ಸೈಯದ್ ಜಮೀರ್ ಪಾಷಾ**

ಪಿ.ಆರ್. 23 ನಿರ್ದೇಶಕರು, ಕೃಷಿ ಮಾರಾಟ ಇಲಾಖೆ ಬೆಂಗಳೂರು.

**ಕೃಷಿ ಮಾರಾಟ ಇಲಾಖೆ**

**ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ. 16, 11ನೇ ರಾಜಭವನ ರಸ್ತೆ, ಪಿ.ಬಿ. ನಂ. 5309, ಬೆಂಗಳೂರು - 560 001.**

**ಅಧಿಸೂಚನೆ**

**ಸಂಖ್ಯೆ:ಕೃಮಾಇ:200:ನಿಯವಿ:2003, ದಿನಾಂಕ: 19ನೇ ಆಗಸ್ಟ್ 2003**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ (1966ರ 27ನೇ ಕರ್ನಾಟಕ ಅಧಿನಿಯಮ) ಪ್ರಕರಣ 6ರ ಉಪಪ್ರಕರಣ (2)ರ ಮೇರೆಗೆ ಹೊರಡಿಸಲಾದ ಈ ಕೆಳಕಂಡ ಅಧಿಸೂಚನೆಗಳಲ್ಲಿ (ಇನ್ನು ಮುಂದೆ ಸದರಿ ಅಧಿಸೂಚನೆ ಎಂದು ಉಲ್ಲೇಖಿಸಲಾಗಿದೆ) ಕರ್ನಾಟಕದಲ್ಲಿನ ಮಾರುಕಟ್ಟೆಗಳ ಮುಖ್ಯಾಧಿಕಾರಿ, ಬೆಂಗಳೂರು ಇವರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಕಾರವಾರ ಇದರ ಮಾರುಕಟ್ಟೆ ಕ್ಷೇತ್ರದಲ್ಲಿ ಅಧಿಸೂಚಿಸಲ್ಪಟ್ಟ ಕೃಷಿ ಉತ್ಪನ್ನಗಳ ನಿಯಂತ್ರಿತ ಮಾರಾಟಕ್ಕಾಗಿ (1) ಸದಾಶಿವಗಡ (ಚಿತ್ತಾಕುಲ) (2) ಬಿಣಗಾ (3) ಚೆಂಡಿಯಾ (4) ಅಮದಳ್ಳಿ (5) ಆರ್ಗಾ (6) ಮಾಜಾಳಿ (7) ಕದ್ರಾ ಮತ್ತು (8) ಅಂಕೋಲಾ ಪ್ರದೇಶಗಳನ್ನು ಉಪ ಮಾರುಕಟ್ಟೆ ಎಂದು ಸದರಿ ಅಧಿಸೂಚನೆಗಳ ಅನುಸೂಚಿಗಳಲ್ಲಿ ನಿರ್ದಿಷ್ಟಪಡಿಸಿದ ಸ್ಥಳಗಳನ್ನು ಉಪ ಮಾರುಕಟ್ಟೆ ಪ್ರಾಂಗಣಗಳೆಂದು ಘೋಷಿಸಿದ್ದರು.

(1) ಸಂಖ್ಯೆ: ಎಂಡಿ:ಇಎಂ:ಸಿಆರ್:214:ಆರ್‌ಅಂಡ್‌ಇ:78-79, ದಿನಾಂಕ: 21-07-1978.

(2) ಸಂಖ್ಯೆ: ಕೃಮಾಇ:291:ನಿಯವಿ:88, ದಿನಾಂಕ: 29-08-1989.

(3) ಸಂಖ್ಯೆ: ಕೃಮಾಇ:170:ನಿಯವಿ:92, ದಿನಾಂಕ: 31-10-1994.

ಈಗ ಕದ್ರಾ ಮತ್ತು ಅಂಕೋಲಾ ಉಪ ಮಾರುಕಟ್ಟೆಗಳಲ್ಲಿ ಮಾತ್ರ ನಿಯಂತ್ರಿತ ಹುಟ್ಟುವಳಿಗಳ ಮಾರಾಟದ ವ್ಯವಹಾರ ಜರುಗುತ್ತಲಿದ್ದು ಉಳಿದ 6 ಉಪ ಮಾರುಕಟ್ಟೆಗಳಾದ ಸದಾಶಿವಗಡ (ಚಿತ್ತಾಕುಲ), ಬಿಣಗಾ, ಚೆಂಡಿಯಾ, ಅಮದಳ್ಳಿ, ಅರ್ಗಾ ಮತ್ತು ಮಾಜಾಳಿ ಪ್ರದೇಶಗಳಲ್ಲಿ ನಿಯಂತ್ರಿತ ಹುಟ್ಟುವಳಿಗಳ ಆವಕವು ಇರದೇ ವಾರದ ಸಂತೆಯಾಗಲಿ ಅಥವಾ ಸಗಟು ವ್ಯವಹಾರವಾಗಲೀ ನಡೆಯುತ್ತಿಲ್ಲ.

ಆದುದರಿಂದ, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ ಪ್ರಕರಣ 3ನ್ನು ಓದಿ ಪ್ರಕರಣ 6ರ ಉಪಪ್ರಕರಣ (3)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕದಲ್ಲಿ ಕೃಷಿ ಮಾರಾಟ ನಿರ್ದೇಶಕನಾಗಿರುವ ಸೈಯದ್ ಜಮೀರ್ ಪಾಷಾ ಆದ ನಾನು, ಕಾರವಾರ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಮಾರುಕಟ್ಟೆ ಕ್ಷೇತ್ರದಲ್ಲಿ ಸರ್ಕಾರದ ಅಧಿಸೂಚನೆಗಳ ಮೂಲಕ ಕಾಲಕಾಲಕ್ಕೆ ಘೋಷಿಸಲಾದ ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕಾಗಿ ಸದರಿ ಅಧಿಸೂಚನೆಗಳ ಮೂಲಕ ಘೋಷಿಸಲಾದ ಸದಾಶಿವಗಡ (ಚಿತ್ತಾಕುಲ), ಬಿಣಗಾ, ಚೆಂಡಿಯಾ, ಅಮದಳ್ಳಿ, ಅರ್ಗಾ ಮತ್ತು ಮಾಜಾಳಿ ಉಪ ಮಾರುಕಟ್ಟೆಗಳನ್ನು ಹಾಗೂ ಅನುಸೂಚಿಗಳಲ್ಲಿ ನಿರ್ದಿಷ್ಟಪಡಿಸಿದ ಸೀಮಾಬದ್ಧ ಸ್ಥಳದ ಉಪ ಮಾರುಕಟ್ಟೆ ಪ್ರಾಂಗಣವನ್ನು ರದ್ದುಪಡಿಸಲು ಉದ್ದೇಶಿಸಿದ್ದೇನೆ.

ಮೇಲಿನ ಪ್ರಸ್ತಾವಕ್ಕೆ ಸಂಬಂಧಿಸಿದಂತೆ ಯಾವುದೇ ಆಕ್ಷೇಪಣೆ ಮತ್ತು ಸಲಹೆಗಳು ಇದ್ದಲ್ಲಿ ಈ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 32 ದಿವಸಗಳೊಳಗಾಗಿ ತಲುಪುವಂತೆ ಕಳುಹಿಸಿಕೊಟ್ಟಲ್ಲಿ ಪರಿಶೀಲಿಸಲಾಗುವುದು. ಆಕ್ಷೇಪಣೆ ಮತ್ತು ಸಲಹೆಗಳನ್ನು ಕೃಷಿ ಮಾರಾಟ ನಿರ್ದೇಶಕರು, ನಂ.16, 11ನೇ ರಾಜಭವನ ರಸ್ತೆ, ಬೆಂಗಳೂರು-01 ಇವರ ವಿಳಾಸಕ್ಕೆ ಕಳುಹಿಸಿಕೊಡಲು ಸೂಚಿಸಲಾಗಿದೆ.

**ಸೈಯದ್ ಜಮೀರ್ ಪಾಷಾ**

ಪಿ.ಆರ್. 24 ನಿರ್ದೇಶಕರು, ಕೃಷಿ ಮಾರಾಟ ಇಲಾಖೆ ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

## ಅಧಿಕೃತ ಜ್ಞಾಪನ

**ನಂ.ಎಲ್‌ಎನ್‌ಡಿ:(ಎನ್)ಸಿಆರ್:68:2003-04, ದಿನಾಂಕ: 17ನೇ ಡಿಸೆಂಬರ್ 2003**

**ವಿಷಯ:** ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ ಬಾಗಲುಗುಂಟೆ ಗ್ರಾಮದ ಸ.ನಂ. 34 ರಲ್ಲಿ 1-00 ಎಕರೆ ಜಮೀನನ್ನು ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗೆ ಮಂಜೂರು ಮಾಡುವ ಬಗ್ಗೆ.

**ಉಲ್ಲೇಖ:**
1. ಬಾಗಲುಗುಂಟೆ ಗ್ರಾಮಸ್ಥರ ಮನವಿ ದಿನಾಂಕ 24-07-2003.
2. ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು, ಬೆಂಗಳೂರು ರವರ ಪತ್ರದ ನಂ.ಎಲ್‌ಎನ್‌ಡಿ:ಸಿಆರ್:122: 2003-04, ದಿನಾಂಕ:12-11-2003.

ವಿಷಯಕ್ಕೆ ಸಂಬಂಧಿಸಿದಂತೆ, ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಬಾಗಲಗುಂಟೆ ಗ್ರಾಮದ ಸರ್ವೆ ನಂ.34 ರಲ್ಲಿನ ಸರ್ಕಾರಿ ಕಟ್ಟೆ ಜಮೀನಿನಲ್ಲಿ 1-00 ಎಕರೆ ಜಮೀನನ್ನು ಬಾಗಲಗುಂಟೆ ಗ್ರಾಮಸ್ಥರು ಸರ್ಕಾರಿ ಹಿಂದು ಪ್ರಾಥಮಿಕ ಶಾಲೆ ಆಟದ ಮೈದಾನಕ್ಕೆ ಕಾಯ್ದಿರಿಸಲು ಕೋರಿರುವ ಬಗ್ಗೆ ತಹಶೀಲ್ದಾರ್‌ರವರು ಕಡತವನ್ನು ತಯಾರುಮಾಡಿ ಶಿಫಾರಸ್ಸಿನೊಂದಿಗೆ ವರದಿ ಸಲ್ಲಿಸಿರುತ್ತಾರೆ.

ಆದ್ದರಿಂದ, ಸರ್ಕಾರದ ಸುತ್ತೋಲೆ ನಂ.ಆರ್‌ಡಿ.250.ಎಲ್‌ಜಿಬಿ:97, ದಿನಾಂಕ: 5-11-1997 ರ ಪ್ರಕಾರ ಹಾಗೂ ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 71 ರಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ ಬಾಗಲಗುಂಟೆ ಗ್ರಾಮದ ಸ.ನಂ.34ರಲ್ಲಿ 1-00 ಎಕರೆ ಸರ್ಕಾರಿ ಕಟ್ಟೆ ಬಗ್ಗೆ ಸ್ಕೆಚ್‌ನಲ್ಲಿ ತೋರಿಸಿರುವಂತೆ 1-00 ಎಕರೆ ಜಮೀನನ್ನು ಸಾರ್ವಜನಿಕ ಉದ್ದೇಶಕ್ಕೆ (ಸರ್ಕಾರಿ ಶಾಲೆಯ ಆಟದ) ಮೈದಾನಕ್ಕೆ ಕಾಯ್ದಿರಿಸಲಾಗಿದೆ.

ಪಿ.ಆರ್. 25 ವಿಶೇಷ ಜಿಲ್ಲಾಧಿಕಾರಿಗಳು (ಕಂ), ಬೆಂಗಳೂರು ಜಿಲ್ಲೆ.

## UNIVERSITY OF AGRICULTURAL SCIENCES, BANGALORE

## Administrative Office, GKVK, Bangalore-560 065

## NOTIFICATION

**No.AO/RT/11/27/2003-04, 31st December 2003**

Applications are invited in the prescribed form from the candidates who are qualified as on the last date prescribed for receipt of filled in applications for filling up of the following post in the University of Agricultural Sciences, Bangalore.

| Name of the post | No. of post | Scale of pay | Category |
|---|---|---|---|
| Assistant Professor of Soil Science and Agricultural Chemistry | One | Rs.8000-275-13500 | GM |

The above post held by Dr. T.H. Hanumantha Raju is notified in pursuance of the orders dated 11-11-2002 passed by the Hon'ble High Court of Karnataka in the Writ Petition No.43080/1995.

**Qualifications in brief:**

Good academic record with at least 55% of the marks or an equivalent grade of B in the 7 point scale with letter grades O,A,B,C,D,E&F at the Master's degree level, in the relevant subject and should have cleared the eligibility test (NET). Knowledge of writing and reading kannada is essential.

**Instructions:**

1. Application fee: Rs.100/- for SC/STs and Rs.200/- for others A Xerox copy of caste certificate issued by the competent authority should be submitted in support of claim for concession.
2. Application forms along with the qualifications may be obtained from the undersigned after publication of this Notification in the News Paper, on payment of the prescribed fee in person either in the form of crossed postal order/Bank Demand Draft drawn in favour of the Comptroller, University of Agricultural Sciences, GKVK, Bangalore-560 065.
   Applications can also be had from the undersigned by post by sending the requisite postal order/demand draft towards the cost with self addressed envelope (size: 12" x 4"- affixing the postal stamp of the value of Rs.12/-).
3. Postal Order/Demand Draft purchased on or after the date of publication of the Notification in the News Papers only are accepted.
4. The candidates have to enclose their bio-data, attested copies of certificates, reprints of their published research papers, books and publications compulsorily to the application. The Books, reports etc. not enclosed to the application will not be taken into consideration at the time of interview.
5. The candidates who studied under Trimestor system and other than 10 points grading system are required to enclose to the application the equivalent percentage certificate obtained from the respective University.
6. Ex-servicemen or children of Defence Personnel killed or disabled in action are exempted from payment of application fee provided they produce the appropriate certificate to this effect.
7. The last date for obtaining blank application form is 20 days from the date of advertisement in the News paper.
8. Filled in applications together with copies of testimonials should be sent so as to reach the undersigned on or before 35 days from the date of Advertisement in the News Paper. The candidates staying abroad may apply within the last date prescribed, on plain paper giving details of their biodata enclosing copies of their educational certificates etc., as per instructions at 2 above along with the prescribed fee in foreign currency.
9. Applications received after the last date and incomplete applications will be rejected.
10. The appointed candidate will be governed by the Statutes, Regulations of the University.

By Order
Administrative Officer

P.D. 2

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

**ಪ್ರಕರಣ ಸಂಖ್ಯೆ:ಕಾಪಕ:ಕಸ-2:2004, ದಿನಾಂಕ: 6ನೇ ಜನವರಿ 2004**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1. ಮಹಾಲಕ್ಷ್ಮಿ ಮತ್ತು ಮಕ್ಕಳು<br>(ಕೋಂ ದಿ: ವಿ. ಸತ್ಯನಾರಾಯಣ) ನಾಗಮ್ಮ ನಿಲಯ,<br>ಹನುಮಂತ ನಗರ ಹಳೆನಗರ ಭದ್ರಾವತಿ. | | 1. ವ್ಯವಸ್ಥಾಪಕರು ನಿರ್ದೇಶಕರು,<br>ಎಂ.ಪಿ.ಎಂ. ಭದ್ರಾವತಿ, (ಎಂ ಪಿ ಎಂ ಭದ್ರಾವತಿ) |

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದು ಏನೆಂದರೆ, ದಿ:ವಿ. ಸತ್ಯನಾರಾಯಣ ರವರು ಪ್ರತಿವಾದಿಯವರಲ್ಲಿ ಕಾರ್ಮಿಕರಾಗಿ ಕೆಲಸದ ಮೇಲೆ ಇದ್ದಾಗ 20-5-03 ರಂದು ಅಪಘಾತಗೊಂಡಿರುವುದರಿಂದ ಮೃತರಾಗಿರುತ್ತಾರೆ.

ಮೃತರು ಪ್ರತಿವಾದಿಯವರ ಕಡೆ ಕೆಲಸದಲ್ಲಿರುವ ಕಾರಣ ಪರಿಹಾರ ಹಣಕ್ಕಾಗಿ ಅರ್ಜಿದಾರರು ದಿನಾಂಕ: 26-12-03 ರಂದು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾನೆ. ಆದುದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದು ಏನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿವಸಗಳ ಒಳಗಾಗಿ ತಮ್ಮ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳನ್ನಾಗಲಿ ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿತ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದರೆ, ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನು ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್. 27